KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಆಗಸ್ಟ್ ೨೪, ೨೦೦೬ (ಭಾದ್ರಪದ ೨, ಶಕವರ್ಷ ೧೯೨೮) | ಸಂಚಿಕೆ ೩೪ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲ ಸಂಪನ್ಮೂಲ ಸಚಿವಾಲಯ
### ತಿದ್ದುಪಡಿ
### ಸಂಖ್ಯೆ: ಜಸಂಇ 60 ಎನ್‌ಹೆಚ್‌ಪಿ 2006, ಬೆಂಗಳೂರು, ದಿನಾಂಕ:7ನೇ ಜುಲೈ, 2006

**ವಿಷಯ:** ಹೇಮಾವತಿ ಯೋಜನೆಗೆ ಸಂಬಂಧಿಸಿದ ನೀರಾವರಿ ಸಲಹಾ ಸಮಿತಿ ಪುನರ್ ರಚನೆಯ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ಜಸಂಇ 60 ಎನ್‌ಹೆಚ್‌ಪಿ 2006, ದಿನಾಂಕ:06.07.2006.

ಉಲ್ಲೇಖಿತ ಸರ್ಕಾರಿ ಆದೇಶ ಭಾಗದಲ್ಲಿರುವ "ಜನಪ್ರತಿನಿಧಿಗಳು" ಅಡಿ ಕ್ರಮಸಂಖ್ಯೆ (5)ರಲ್ಲಿರುವ "ಡಾ: ಜಿ. ಪರಮೇಶ್ವರ್, ವಿಧಾನ ಪರಿಷತ್ ಸದಸ್ಯರು, ಪದವೀಧರ ಕ್ಷೇತ್ರ" ಎಂಬುದನ್ನು ಡಾ: ಜಿ. ಪರಮೇಶ್ವರ್, ವಿಧಾನ ಸಭಾ ಸದಸ್ಯರು, ಮಧುಗಿರಿ ಕ್ಷೇತ್ರ" ಎಂದು ಹಾಗೂ ಕ್ರಮಸಂಖ್ಯೆ:(6)ರಲ್ಲಿರುವ "ಶ್ರೀ ಹೆಚ್. ಶಿವಶಂಕರ್, ವಿಧಾನಪರಿಷತ್ ಸದಸ್ಯರು, ಮಧುಗಿರಿ ಕ್ಷೇತ್ರ" ಎಂಬುದನ್ನು "ಶ್ರೀ ಹೆಚ್.ಎಸ್. ಶಿವಶಂಕರ್, ವಿಧಾನ ಪರಿಷತ್ ಸದಸ್ಯರು, ಪದವೀಧರ ಕ್ಷೇತ್ರ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಸ್. ರಂಗರಾಜು**
ಪಿ.ಆರ್. 1146
ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ, ಎಂಎಂಐ-3),
ಜಲ ಸಂಪನ್ಮೂಲ ಇಲಾಖೆ.

### ಸಮಾಜ ಕಲ್ಯಾಣ ಸಚಿವಾಲಯ
### ಸೇರ್ಪಡೆ ಆದೇಶ
### ಸಂಖ್ಯೆ: ಸಕಇ 40 ಎಸ್‌ಬಿಆರ್ 03, ಬೆಂಗಳೂರು, ದಿನಾಂಕ: 20ನೇ ಜುಲೈ, 2006

ಸರ್ಕಾರದ ಆದೇಶ ಸಂಖ್ಯೆ: ಸಕಇ 40 ಎಸ್‌ಬಿಆರ್ 2003, ದಿನಾಂಕ:16.08.2005ರ ಆದೇಶದ ಎರಡನೇ ಕಂಡಿಕೆಯ ನಂತರ ಈ ಕೆಳಕಂಡ ಪ್ಯಾರಾವನ್ನು ಸೇರ್ಪಡೆಗೊಳಿಸಿ ಓದಿಕೊಳ್ಳತಕ್ಕದ್ದು.

"ಮೇಲ್ಕಂಡ ಜಮೀನುಗಳನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಹಾಗೂ ಬೆಂಗಳೂರು ಮಹಾನಗರ ಪಾಲಿಕೆಗೆ ಗುತ್ತಿಗೆ ಆಧಾರದ ಮೇಲೆ ನೀಡುವ ಸಂಬಂಧದಲ್ಲಿ (ಸರ್ಕಾರವು) ಅಗತ್ಯತೆಗೆ ಅನುಸಾರ ಕಾಲಕಾಲಕ್ಕೆ ಷರತ್ತುಗಳನ್ನು ವಿಧಿಸಲಾಗುವುದು."

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಂ. ಚಿದಾನಂದಸ್ವಾಮಿ**
ಪಿ.ಆರ್. 1147
ಸರ್ಕಾರದ ಅಧೀನ ಕಾರ್ಯದರ್ಶಿ-II,
ಸಮಾಜ ಕಲ್ಯಾಣ ಇಲಾಖೆ.

### ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಹಿರಿಯ ನಾಗರೀಕರಿಗೆ ಗುರುತಿನ ಚೀಟಿ ವಿತರಿಸುವ ಬಗ್ಗೆ.

**ಓದಲಾಗಿದೆ:** (1) ನಿರ್ದೇಶಕರು, ಅಂಗವಿಕಲರ ಹಾಗೂ ಹಿರಿಯ ನಾಗರೀಕರ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ನಿಅಹಿನಾಕಇ: ಹಿನಾವಿ:ಗುಚಿ: 2005-06, ದಿನಾಂಕ:23.01.2006.

(2) ಸರ್ಕಾರಿ ಆದೇಶ ಸಂಖ್ಯೆ: ಮಮಇ 406 ಎಸ್‌ಜೆಡಿ 2004, ದಿನಾಂಕ:28.09.2004.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಪತ್ರದಲ್ಲಿ ಹಿರಿಯ ನಾಗರೀಕರಿಗೆ ಗುರುತಿನ ಚೀಟಿಯನ್ನು ವಿತರಿಸಲು ತಗಲುವ ವೆಚ್ಚವನ್ನು ಹಿರಿಯ ನಾಗರೀಕರ ಮಹಾ ಮಂಡಳಿ ಭರಿಸುವ ಷರತ್ತಿಗೊಳಪಟ್ಟು, ಹಿರಿಯ ನಾಗರೀಕರಿಗಾಗಿ ಗುರುತಿನ ಚೀಟಿಯನ್ನು ಅಂಗವಿಕಲರ ಹಾಗೂ ಹಿರಿಯ ನಾಗರೀಕರ ಕಲ್ಯಾಣ ನಿರ್ದೇಶನಾಲಯದಿಂದ, ಅಧಿಕೃತ ಸಹಿ ಮಾಡಿ ವಿತರಿಸಲು ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ ಎಂದು ತಿಳಿಸುತ್ತಾ, ವಿವಿಧ ಜಿಲ್ಲೆಗಳಿಂದ ಗುರುತಿನ ಚೀಟಿ ನೀಡಲು ಹೆಚ್ಚಿನ ಬೇಡಿಕೆಗಳು ಬರುತ್ತಿದ್ದು, ಒಂದೇ ಸಂಸ್ಥೆಯು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿನ ಹಿರಿಯ ನಾಗರೀಕರಿಗೆ ನಿಗದಿತ ಸಮಯದಲ್ಲಿ ಗುರುತಿನ ಚೀಟಿಗಳನ್ನು ಒದಗಿಸಲು ಸಾಧ್ಯವಾಗುತ್ತಿಲ್ಲವಾದ್ದರಿಂದ ಆಯಾ ಜಿಲ್ಲೆಯ ಸ್ವಯಂ ಸೇವಾ ಸಂಸ್ಥೆ/ ರಾಜ್ಯ ಸರ್ಕಾರಿ ನಿವೃತ್ತ ಪಿಂಚಣಿದಾರರ ಅಥವಾ ಫೆಡರೇಷನ್ ಫಾರ್ ಸೀನಿಯರ್ ಸಿಟಿಜನ್ ಫೋರಂ ಆಫ್ ಕರ್ನಾಟಕ ಇವುಗಳಲ್ಲಿ ಯಾವ ಸಂಸ್ಥೆ ಮುಂದೆ ಬರುವುದೋ ಅವುಗಳಲ್ಲಿ ಉಪನಿರ್ದೇಶಕರು ಗುರುತಿಸುವಂತಹ ಸಂಸ್ಥೆಯು ಗುರುತಿನ ಚೀಟಿ ಅವಶ್ಯವಿರುವ ಹಿರಿಯ ನಾಗರಿಕರಿಂದ ರೂ.25/- ಮೊತ್ತವನ್ನು ಪಡೆದು ಗುರುತಿನ ಚೀಟಿಯನ್ನು ತಯಾರಿಸಿ ಸಂಬಂಧಪಟ್ಟ ಜಿಲ್ಲೆಯ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಅಧಿಕೃತ ಸಹಿ ಮಾಡಿ ವಿತರಿಸಲು ಈಗಾಗಲೇ ಹೊರಡಿಸಿರುವ ಕ್ರಮಸಂಖ್ಯೆ (2)ರ ಆದೇಶವನ್ನು ಮಾರ್ಪಡಿಸಬೇಕೆಂದು ಕೋರಲಾಗಿದೆ.

ದಿನಾಂಕ:26.11.2005 ರಂದು, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಹಿರಿಯ ನಾಗರೀಕರ ನೀತಿ ಅನುಷ್ಠಾನಗೊಳಿಸುವ ಕುರಿತು ನಡೆದ ಸಭೆಯಲ್ಲಿ ಇಲಾಖೆಯ ಪ್ರಸ್ತಾವನೆಯಲ್ಲಿ, ಸೂಚಿಸಿರುವ ಸಮಸ್ಯೆಗಳನ್ನು ಸಭೆಯಲ್ಲಿ ಹಾಜರಿದ್ದ ಪ್ರತಿನಿಧಿಗಳು ವಿವರಿಸಿದ್ದು ಹಾಗೂ ಪ್ರತಿ ಜಿಲ್ಲೆ ಹಾಗೂ ತಾಲ್ಲೂಕುಗಳಲ್ಲಿ ನಿವೃತ್ತ ನೌಕರರ ಸಂಘದ ಕಛೇರಿಗಳಿದ್ದು, ಈ ಕಾರ್ಯವನ್ನು ಕೈಗೊಳ್ಳಬಹುದೆಂದು ತಿಳಿಸಿದ್ದು, ಸಂಬಂಧಪಟ್ಟ ಎಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ಗುರುತಿನ ಚೀಟಿಗಳಲ್ಲಿ ಸಹಿ ಮಾಡಲು ಮತ್ತು ಸಂಬಂಧಪಟ್ಟ ಅರ್ಜಿಗಳನ್ನು ವಿಲೆ ಮಾಡಲು ಅಧಿಕಾರ ನೀಡಬಹುದೆಂಬ ನಿರ್ಣಯವನ್ನು ಕೈಗೊಳ್ಳಲಾಗಿದೆ.

ದಿನಾಂಕ: 26.11.2005ರ ಸಭೆಯ ನಡವಳಿಯ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ್ದು, ಈ ಕೆಳಗೆ ಸೂಚಿಸಿದಂತೆ ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಆದೇಶವನ್ನು ಮಾರ್ಪಡಿಸಲು ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 242 ಎಸ್‌ಜೆಡಿ 2006, ಬೆಂಗಳೂರು, ದಿನಾಂಕ:25ನೇ ಜುಲೈ, 2006**

ಸರ್ಕಾರಿ ಆದೇಶ ಸಂಖ್ಯೆ: ಮಮಇ 406 ಎಸ್‌ಜೆಡಿ 2004, ದಿನಾಂಕ:28.09.2004ರ ಸರ್ಕಾರಿ ಆದೇಶದ ಮುಖ್ಯ ಭಾಗವನ್ನು ಈ ಕೆಳಗೆ ಸೂಚಿಸಿದಂತೆ, ಮಾರ್ಪಡಿಸಲಾಗಿದೆ:

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಪ್ರಸ್ತಾವನೆಗೆ ತಗಲುವ ವೆಚ್ಚವನ್ನು ಆಯಾ ಜಿಲ್ಲೆಯ ಸ್ವಯಂ ಸೇವಾ ಸಂಸ್ಥೆ/ ರಾಜ್ಯ ಸರ್ಕಾರಿ ನಿವೃತ್ತ ಪಿಂಚಣಿದಾರರ ಅಥವಾ ಫೆಡರೇಷನ್ ಫಾರ್ ಸೀನಿಯರ್ ಸಿಟಿಜನ್ ಫೋರಂ ಆಫ್ ಕರ್ನಾಟಕ ಇವುಗಳಲ್ಲಿ ಸಂಬಂಧಪಟ್ಟ ಜಿಲ್ಲೆಯ ಉಪನಿರ್ದೇಶಕರು, ಗುರುತಿಸಿ ನಿಗದಿಪಡಿಸುವ ಸಂಸ್ಥೆಯು ಗುರುತಿನ ಚೀಟಿ ಅವಶ್ಯವಿರುವ ಹಿರಿಯ ನಾಗರೀಕರಿಂದ ರೂ.25/- ಮೊತ್ತವನ್ನು ಸಂಗ್ರಹಿಸಿ ವೆಚ್ಚ ಭರಿಸುವ ಷರತ್ತಿಗೊಳಪಟ್ಟು ಹಿರಿಯ ನಾಗರೀಕರಿಗಾಗಿ ಗುರುತಿನ ಚೀಟಿಯನ್ನು ಸಂಬಂಧಪಟ್ಟ ಜಿಲ್ಲೆಯ ಸಹಾಯಕ/ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ಅಧಿಕೃತ ಸಹಿ ಮಾಡಿ ವಿತರಿಸಲು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಪಿ.ಆರ್. 1148

ಸರ್ಕಾರದ ಅಧೀನ ಕಾರ್ಯದರ್ಶಿ-2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಸುಭೋದ್ ಯಾದವ್, ಐಎಎಸ್, ಇವರಿಗೆ ಸೇವಾವಹಿಯಲ್ಲಿ ನಮೂದಾಗಿರುವ ಸ್ವಗ್ರಾಮ ವಿಳಾಸವನ್ನು ಬದಲಾಯಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಮಹಾಲೇಖಪಾಲರು, ಕರ್ನಾಟಕ ಬೆಂಗಳೂರು ಇವರ ಪತ್ರಸಂಖ್ಯೆ:GM/IAS-II/793, ದಿನಾಂಕ:27.02.2004.

2. ಶ್ರೀ ಸುಭೋದ್ ಯಾದವ್, ಐಎಎಸ್, ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿ, ಕೊಡಗು ಜಿಲ್ಲೆ, ಮಡಿಕೇರಿ ಇವರ ಅ.ಸ. ಪತ್ರ ಸಂಖ್ಯೆ: ಜಿಅಕೋ/ ಆಶಾ/ 09/ 2005-06, ದಿನಾಂಕ:02.12.2005 ಮತ್ತು 29.12.2005.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ 1ರಲ್ಲಿ ಉಲ್ಲೇಖಿತ ಪತ್ರದಲ್ಲಿ ಮಹಾಲೇಖಪಾಲರು ನೀಡಿದ ಮಾಹಿತಿ ಮೇರೆಗೆ ಶ್ರೀ ಸುಭೋದ್ ಯಾದವ್, ಐಎಎಸ್, ಇವರ ಸ್ವಗ್ರಾಮವು ಗ್ರಾಮ-ಸಬಾಪುರ, ಜಿಲ್ಲೆ-ಷತೇಹಪುರ, ಉತ್ತ ಪ್ರದೇಶ ಎಂದು ಸೇವಾವಹಿಯಲ್ಲಿ ದಾಖಲಾಗಿರುತ್ತದೆ. ಸದರಿ ಸ್ಥಳವು ತಾವು ಹುಟ್ಟಿದ್ದು ಚಿಕ್ಕ ಹಳ್ಳಿಯಾಗಿದ್ದು, ಅದು ತಮ್ಮ ಸ್ವಗ್ರಾಮವಾಗಿರುವುದಿಲ್ಲ, ತಮ್ಮ ತಂದೆ ತಾಯಿ ಹಾಗೂ ಅವರ ಸ್ವಂತ ಗ್ರಾಮವು ಹಂಸಪುರಂ ನವ್‌ಬಸ್ತ, ಕಾನಪುರ್ (ಉತ್ತರಪ್ರದೇಶ) ಇರುವುದರಿಂದ ಸ್ವಗ್ರಾಮ ಪ್ರಯಾಣ ರಿಯಾಯಿತಿ ಉದ್ದೇಶಕ್ಕಾಗಿ 'ಹಂಸಪುರಂ' ಅನ್ನು ಸ್ವಗ್ರಾಮವೆಂದು ನಮೂದಿಸಬೇಕೆಂದು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 611 ಸೇಅಸೆ 2005, ಬೆಂಗಳೂರು, ದಿನಾಂಕ:26ನೇ ಜುಲೈ, 2006**

ಸ್ವಗ್ರಾಮ ಪ್ರಯಾಣ ರಿಯಾಯಿತಿ ಉದ್ದೇಶಕ್ಕಾಗಿ ಶ್ರೀ ಸುಭೋದ್ ಯಾದವ್, ಐಎಎಸ್, ಇವರ ಸ್ವಗ್ರಾಮವೆಂದು ನಮೂದಿಸಲಾಗಿರುವ ಗ್ರಾಮ-ಸಬಾಪುರ, ಜಿಲ್ಲೆ-ಷತೇಹಪುರ, ಉತ್ತರ ಪ್ರದೇಶಕ್ಕೆ ಬದಲಾಗಿ 'HANSPURAM, NAVABASTA, KANPUR (UTTAR PRADESH)' ಯನ್ನು ಸ್ವಗ್ರಾಮವೆಂದು ಪರಿಗಣಿಸಲು ಅನುಮತಿ ನೀಡಿದೆ.

ಸ್ವಗ್ರಾಮ ಪ್ರಯಾಣ ರಿಯಾಯಿತಿ ಉದ್ದೇಶಕ್ಕಾಗಿ ಸ್ವಗ್ರಾಮ ಬದಲಾವಣೆಯ 2006-07ರ ಬ್ಲಾಕ್ ಅವಧಿಯಿಂದ ಜಾರಿಗೆ ಬಂದಿರುತ್ತದೆ. ಮತ್ತು ಸ್ವಗ್ರಾಮ ಘೋಷಣೆಯನ್ನು ಮತ್ತೆ ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

ಪಿ.ಆರ್. 1149

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ (ದೌರ್ಜನ್ಯ ನಿಯಂತ್ರಣ) ನಿಯಮಗಳು 1995ರಡಿಯಲ್ಲಿ ರಾಜ್ಯ ಮಟ್ಟದ ಜಾಗೃತ ಮತ್ತು ಉಸ್ತುವಾರಿ ಸಮಿತಿ ರಚನೆ ಕುರಿತು ಆದೇಶ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಸಕಇ 69 ಎಸ್‌ಪಿಎ 2004, ದಿನಾಂಕ:22.09.2005.

**ಪ್ರಸ್ತಾವನೆ:**

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ (ದೌರ್ಜನ್ಯ ನಿಯಂತ್ರಣ) ನಿಯಮಗಳು 1995ರ 16ನೇ ನಿಯಮದ ಅಡಿಯಲ್ಲಿ ರಾಜ್ಯ ಸರ್ಕಾರವು ಉನ್ನತಾಧಿಕಾರದ ಒಂದು ರಾಜ್ಯ ಮಟ್ಟದ ಜಾಗೃತ ಮತ್ತು ಉಸ್ತುವಾರಿ ಸಮಿತಿ ರಚಿಸಲು ಉಪಬಂಧವಿರುತ್ತದೆ. ಸದರಿ ಉಪಬಂಧಗಳನ್ವಯ ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ರಚಿಸಲಾದ ಸಮಿತಿಯನ್ನು ಪುನರ್ ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 18 ಎಸ್.ಪಿ.ಎ. 2006, ಬೆಂಗಳೂರು, ದಿನಾಂಕ:21ನೇ ಜುಲೈ, 2006**

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ (ದೌರ್ಜನ್ಯ ತಡೆ) ನಿಯಮಾವಳಿ 1995ರ ನಿಯಮ 16ರಡಿಯಲ್ಲಿ ರಾಜ್ಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡ "ರಾಜ್ಯ ಮಟ್ಟದ ಜಾಗೃತ ಮತ್ತು ಉಸ್ತುವಾರಿ ಸಮಿತಿಯನ್ನು" ಪುನರ್ ರಚಿಸಲಾಗಿದೆ:

| | |
|---|---|
| 1. ಮಾನ್ಯ ಮುಖ್ಯಮಂತ್ರಿಗಳು | - ಅಧ್ಯಕ್ಷರು |
| 2. ಮಾನ್ಯ ಉಪಮುಖ್ಯಮಂತ್ರಿ ಹಾಗೂ ಹಣಕಾಸು ಸಚಿವರು. | - ಸದಸ್ಯರು |
| 3. ಶ್ರೀ ಎಂ.ಪಿ. ಪ್ರಕಾಶ್, ಮಾನ್ಯ ಗೃಹ ಸಂಸದೀಯ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವರು | - ಸದಸ್ಯರು |
| 4. ಮಾನ್ಯ ಸಮಾಜ ಕಲ್ಯಾಣ ಸಚಿವರು | - ಸದಸ್ಯರು |
| 5. ಶ್ರೀ ಕೆ.ಹೆಚ್. ಮುನಿಯಪ್ಪ, ಮಾನ್ಯ ಕೇಂದ್ರ, ಭೂ ಸಾರಿಗೆ ರಾಜ್ಯ ಸಚಿವರು | - ಸದಸ್ಯರು |
| 6. ಶ್ರೀ ಗೋವಿಂದ ಎಂ. ಕಾರಜೋಳ, ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಸಚಿವರು | - ಸದಸ್ಯರು |
| 7. ಶ್ರೀ ಆಲ್ಕೋಡ್ ಹನುಮಂತಪ್ಪ, ಮಾನ್ಯ ಯುವಜನ ಸೇವಾ ಮತ್ತು ಕ್ರೀಡಾ ಸಚಿವರು | - ಸದಸ್ಯರು |
| 8. ಶ್ರೀ ಬಿ. ಶ್ರೀರಾಮುಲು, ಮಾನ್ಯ ಪ್ರವಾಸೋದ್ಯಮ ಮತ್ತು ಜವಳಿ ಸಚಿವರು | - ಸದಸ್ಯರು |
| 9. ಶ್ರೀ ರೇವುನಾಯಕ್ ಬೆಳಮಗಿ, ಮಾನ್ಯ ಪಶುಸಂಗೋಪನಾ ಸಚಿವರು | - ಸದಸ್ಯರು |
| 10. ಶ್ರೀ ಹೆಚ್. ಕೆ. ಕುಮಾರಸ್ವಾಮಿ, ಮಾನ್ಯ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವರು | - ಸದಸ್ಯರು |
| 11. ಶ್ರೀ ನರಸಿಂಗರಾವ್ ಸೂರ್ಯವಂಶಿ, ಮಾನ್ಯ ಲೋಕಸಭಾ ಸದಸ್ಯರು, ಚಿತ್ರದುರ್ಗ. | - ಸದಸ್ಯರು |
| 12. ಶ್ರೀ ಎ. ವೆಂಕಟೇಶ ನಾಯಕ್, ಮಾನ್ಯ ಲೋಕಸಭಾ ಸದಸ್ಯರು, ರಾಯಚೂರು. | - ಸದಸ್ಯರು |
| 13. ಶ್ರೀ ಜಿಗಜಿಣಗಿ ರಮೇಶ್ ಚಂದಪ್ಪ, ಮಾನ್ಯ ಲೋಕಸಭಾ ಸದಸ್ಯರು, ಚಿಕ್ಕೋಡಿ. | - ಸದಸ್ಯರು |
| 14. ಶ್ರೀ ಎಂ. ಶಿವಣ್ಣ, ಮಾನ್ಯ ಲೋಕಸಭಾ ಸದಸ್ಯರು, ಚಾಮರಾಜನಗರ. | - ಸದಸ್ಯರು |
| 15. ಶ್ರೀ ಮಲ್ಲಿಕಾರ್ಜುನ ಖರ್ಗೆಯವರು, ಮಾನ್ಯ ವಿಧಾನಸಭಾ ಸದಸ್ಯರು | - ಸದಸ್ಯರು |
| 16. ಶ್ರೀ ಕೆ.ಎಂ. ತಿಮ್ಮರಾಯಪ್ಪ, ಮನ್ಯ ವಿಧಾನಸಭಾ ಸದಸ್ಯರು, ಪಾವಗಡ. | - ಸದಸ್ಯರು |
| 17. ಡಾ: ಕೆ. ಅನ್ನದಾನಿ, ಮಾನ್ಯ ವಿಧಾನಸಭಾ ಸದಸ್ಯರು, ಮಳವಳ್ಳಿ. | - ಸದಸ್ಯರು |
| 18. ಶ್ರೀ ವೆಂಕಟೇಶ್, ಮಾನ್ಯ ವಿಧಾನಸಭಾ ಸದಸ್ಯರು, ಹೆಗ್ಗಡದೇವನಕೋಟೆ. | - ಸದಸ್ಯರು |
| 19. ಶ್ರೀಮತಿ ಜಲಜಾನಾಯಕ್, ಮಾನ್ಯ ವಿಧಾನ ಪರಿಷತ್ ಸದಸ್ಯರು. | - ಸದಸ್ಯರು |
| 20. ಡಾ: ಎಲ್. ಹನುಮಂತಯ್ಯ, ಮಾನ್ಯ ವಿಧಾನ ಪರಿಷತ್ ಸದಸ್ಯರು. | - ಸದಸ್ಯರು |
| 21. ಶ್ರೀ ಎನ್. ಮಂಜುನಾಥ್, ಮಾನ್ಯ ವಿಧಾನ ಪರಿಷತ್ ಸದಸ್ಯರು | - ಸದಸ್ಯರು |
| 22. ಸರ್ಕಾರದ ಮುಖ್ಯ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು. | - ಸದಸ್ಯರು |
| 23. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ. | - ಸದಸ್ಯರು |
| 24. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರು. | - ಸದಸ್ಯರು |
| 25. ನಿರ್ದೇಶಕರು, ರಾಷ್ಟ್ರೀಯ ಪರಿಶಿಷ್ಟ ಜಾತಿಗಳ ಆಯೋಗ, ಕರ್ನಾಟಕ, ಬೆಂಗಳೂರು. | - ಸದಸ್ಯರು |
| 26. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ. | - ಕನ್ವೀನರ್ (ಸಮಾವೇಶಕರು) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ-2,

ಸಮಾಜ ಕಲ್ಯಾಣಇಲಾಖೆ.

ಪಿ.ಆರ್. 1150

## ಕಂದಾಯ ಸಚಿವಾಲಯ

**ವಿಷಯ:** ಟಾಗೂರ್ ಸ್ಮಾರಕ ಶಿಕ್ಷಣ ಸಂಸ್ಥೆ, ರಾಯಚೂರು ಜಿಲ್ಲೆ, ರಾಯಚೂರು ಈ ಸಂಸ್ಥೆಗೆ ಸಲಹಾ ಸಮಿತಿ ಸದಸ್ಯರನ್ನು ನೇಮಕ ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಂಇ 10 ಮುನೊಸೊ 2001 (ಭಾ) ದಿನಾಂಕ:13.02.2002.

2. ಸರ್ಕಾರಿ ಆದೇಶ ಸಂಖ್ಯೆ: ಕಂಇ 48 ಮುನೊಸೊ 2006, ದಿನಾಂಕ:19.06.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆ, ರಾಯಚೂರು ಈ ಸಂಸ್ಥೆಯ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲಾಗಿದ್ದು ಓದಲಾದ (2)ರ ಆದೇಶದಲ್ಲಿ ಆಡಳಿತಾಧಿಕಾರಿ ಸಹಾಯಕ್ಕಾಗಿ 17 ಸದಸ್ಯರ ಸಲಹಾ ಸಮಿತಿ ನೇಮಕ ಮಾಡಲಾಗಿತ್ತು, ಸದರಿ ಸಲಹಾ ಸಮಿತಿಗೆ ಇನ್ನೂ ಹೆಚ್ಚುವರಿಯಾಗಿ 12 ಅಧಿಕಾರೇತರ ಸದಸ್ಯರನ್ನು ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದ್ದು ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 48 ಮುನೊಸೊ 2006, ಬೆಂಗಳೂರು, ದಿನಾಂಕ:21ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 10 ಮುನೊಸೊ 2001 (ಭಾ), ದಿನಾಂಕ:14.02.2003 ಮತ್ತು 02.07.2003 ರಲ್ಲಿ ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆ, ರಾಯಚೂರು ಈ ಸಂಸ್ಥೆಗೆ ನೇಮಕವಾದ ಆಡಳಿತಾಧಿಕಾರಿ ಸಹಾಯಕ್ಕಾಗಿ ನೇಮಕ ಮಾಡಿದ ಅಧಿಕಾರೇತರ 17 ಸದಸ್ಯರ ಸಲಹಾ ಸಮಿತಿಗೆ ಇನ್ನೂ ಹೆಚ್ಚುವರಿಯಾಗಿ ಈ ಕೆಳಗೆ ನಮೂದಿಸಿದ ಅಧಿಕಾರೇತರ 12 ಸದಸ್ಯರನ್ನು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(5ಎ) ಪ್ರಕಾರ ಮುಂದಿನ ಆದೇಶದವರೆಗೆ ನೇಮಿಸಿದೆ.

**ಶ್ರೀಯುತರಾದ:**

1. ಎಸ್.ಪಿ. ಹನುಮೇಶ್, ಮನೆ ನಂ.1-423, ಸ್ಟೇಷನ್ ಏರಿಯಾ, ರಾಯಚೂರು.
2. ಹೆಚ್. ಬಸವನಗೌಡ, ಕಿಲ್‌ಕಿಲೇ ಕಾಂಪೌಂಡ್, ಆಜಾದ್ ನಗರ, ರಾಯಚೂರು.
3. ಶ್ರೀಮತಿ ಶೋಭಾ ಪೀರನಾಯಕ, ಭಾರತೀಯ ವಿದ್ಯಾನಿಕೇತನ, ಸ್ಟೇಷನ್ ಏರಿಯಾ, ರಾಯಚೂರು.
4. ಸೋಹನ್‌ಲಾಲ ಜೈನ್, ಫರ್ನಿಚರ್ ಹೌಸ್, ಬಂಗಿಕುಂಟ, ರಾಯಚೂರು.
5. ಕೆ. ಆನಂದ, ಫಾರೂಕ್ ಅನ್ವರ್ ಆಯಿಲ್ ಮಿಲ್ ಎದುರಿಗೆ, ಗಾಜ್‌ಗಾರ್ ಪೇಟೆ, ರಾಯಚೂರು.
6. ಬಿ.ಎಸ್. ಸುರಗಿಮಠ, ಮನೆ ನಂ.8-11-36, ನೀಲಕಂಠೇಶ್ವರ, ರಾಯಚೂರು.
7. ವೆಂಕಟಸ್ವಾಮಿ, ಸಿಯಾತಲಾಬ್, ರಾಯಚೂರು.
8. ಡಾ: ರವೀಂದ್ರ ಮುಜುಂದಾರ, ಲ್ಯಾಂಡ್‌ಮಾರ್ಕ್ ಆಸ್ಪತ್ರೆ, ವಿವೇಕಾನಂದ ವೃತ್ತ, ರಾಯಚೂರು.
9. ಶಶಿರಾಜ್ ಮಸ್ಕಿ, ಮನೆ ನಂ.7-5-11, ಜವಾಹರ್ ನಗರ, ರಾಯಚೂರು.
10. ಆರ್.ಎಸ್. ಪಾಟೀಲ, ಮಲ್ಲನ ನಾರಾಯಣ ಕಲ್ಯಾಣ ಮಂಟಪ, ಸ್ಟೇಷನ್ ರಸ್ತೆ, ರಾಯಚೂರು.
11. ರಾಮನಗೌಡ ಜಾಲಿಬೆಂಚಿ, ಮನೆ ನಂ.1-11-56/ 13, ವೆಂಕಟೇಶ್ವರ ಕಾಲೋನಿ, ರಾಯಚೂರು.
12. ಎಂ. ಕಿಶನ್‌ರಾವ್, ಸಂಪಾದಕರು, ರಾಯಚೂರು ವಾರ್ತೆ, ಮನೆ ನಂ.4-4-223/ 220, ಸತ್ಯನಾಥ ಕಾಲೋನಿ, ರಾಯಚೂರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪೀಠಾಧಿಕಾರಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 1126

**ವಿಷಯ:** ಶ್ರೀ ಎಸ್.ಡಿ. ಫವಾರಿ, ಹಿಂದಿನ ತಹಶೀಲ್ದಾರ್ ಬಾಗಲಕೋಟೆ ಪ್ರಸ್ತುತ ನಿವೃತ್ತ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ.46.ಎಡಿಇ:2004, ದಿನಾಂಕ:15.09.2004.

2. ಬಾಗಲಕೋಟೆ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಆರ್.ಬಿ/ ಸಿಬ್ಬಂದಿ-2/ ಸಿಆರ್-25/ 04-05, ದಿನಾಂಕ:15.10.2004.

3. ದಿನಾಂಕ:02.12.2004ರ ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆರ್.ಡಿ. 46, ಎಡಿಇ:2004.

4. ಶ್ರೀ ಎಸ್.ಡಿ. ಫವಾರಿ, ನಿವೃತ್ತ ತಹಶೀಲ್ದಾರರ ದಿನಾಂಕ:21.12.2005ರ ಹೇಳಿಕೆ.

5. ಸರ್ಕಾರದ ಆದೇಶ ಸಂಖ್ಯೆ: ಕಂಇ:46: ಎಡಿಇ: 2004, ದಿನಾಂಕ:24.01.2005.

**ಪ್ರಸ್ತಾವನೆ:**

ಶ್ರೀ ಎಸ್.ಡಿ. ಫವಾರಿ ತಹಶೀಲ್ದಾರ್, ಹಾಲಿ ನಿವೃತ್ತ ಇವರು ತಹಶೀಲ್ದಾರ್ ಬಾಗಲಕೋಟೆ ತಾಲ್ಲೂಕು ಹಾಗೂ ಕಾರ್ಯದರ್ಶಿ ಭೂ ನ್ಯಾಯಮಂಡಳಿ ಬಾಗಲಕೋಟೆ ಅಂತ ಕಾರ್ಯನಿರ್ವಹಿಸುತ್ತಿದ್ದಾಗ ಬಾಗಲಕೋಟೆ ತಾಲ್ಲೂಕಿನ ಅನ್ನದಿನ್ನಿ ಗ್ರಾಮದ ರಿ.ಸ.ನಂ.4ಕ್ಕೆ ಸಂಬಂಧಿಸಿದಂತೆ ಭೂನ್ಯಾಯಮಂಡಳಿಯ ಆದೇಶ ಕುರಿತು ಸದರಿ ಸರ್ವೆ ನಂಬರಿನ ಹೆ:ರದ ಪಟ್ಟಾ ಕಾಲಂದಲ್ಲಿ ಗಾಯರಾಣಾ ಅಂತಾ ನಮೂದ ಇದ್ದರೂ ಅದನ್ನು ಪರಿಶೀಲಿಸದೆ ಗೇಣಿ ಅರ್ಜಿಯನ್ನು ಭೂನ್ಯಾಯಮಂಡಳಿ ಮುಂದೆ ಇಟ್ಟಿರುವುದು ಗೇಣಿ ಜಮೀನೆಂದು ನಮೂನೆ 7ರಲ್ಲಿ ಹಾಕಿದ ಅರ್ಜಿಯನ್ನು ದಿನಾಂಕ:02.10.1965ರಿಂದ 01.03.1974ರವರೆಗೆ ಹಾಗೂ ತದನಂತರ ಹೆಸರು ಕಡಿಮೆಯಾದ ಬಗ್ಗೆ ಸಂಬಂಧಿಸಿದ ದಾಖಲೆಗಳೊಂದಿಗೆ ಪರಿಶೀಲಿಸಿ ಪರಿಶೀಲನಾ ಪಟ್ಟಿಯೊಂದಿಗೆ ಭೂನ್ಯಾಯ ಮಂಡಳಿ ಅಧ್ಯಕ್ಷರಿಗೆ ಸಲ್ಲಿಸದೇ ಕರ್ತವ್ಯ ಲೋಪವೆಸಗಿರುವುದು ಸದರಿ ಅರ್ಜಿದಾರರ ಹೆಸರು ಇತರ ಹಕ್ಕಿನಲ್ಲಿ ಸಾದಾಕುಳವೆಂದು ದಾಖಲಿದ್ದರೂ ಅದು ಡ ದಾಖಲಾತಿ ಇಲ್ಲದೆ ಇದ್ದುದನ್ನು ಪರಿಶೀಲಿಸಿ ಅಧ್ಯಕ್ಷರ ಗಮನಕ್ಕೆ ತರದಿರುವುದು ಹಾಗೂ ಭೂನ್ಯಾಯ ಮಂಡಳಿಯ ಅಧ್ಯಕ್ಷರು ತಮ್ಮ ಅಸಮ್ಮತಿ ಸೂಚಿಸಿ ಸದಸ್ಯರ ಬಹುಮತವಿದ್ದುದರಿಂದ ಬಹುಮತ ನಿರ್ಣಯದ ಆದೇಶವನ್ನು ಮಾಡಿದ್ದು ಇದೊಂದು ಡಿಸೆಂಡಿಂಗ್ ಆದೇಶವಿದ್ದು ಇದನ್ನು ಸರ್ಕಾರಕ್ಕೆ ಪರಿಶೀಲನೆಗಾಗಿ ಕಳುಹಿಸುವ ಮೊದಲು ತರಾತುರಿಯಲ್ಲಿ ನಮೂನೆ ನಂ.10ನ್ನು ಕೊಟ್ಟಿರುವ ಗಂಭೀರ

ಕರ್ತವ್ಯಲೋಪದ ಬಗ್ಗೆ ಬಾಗಲಕೋಟೆ ಜಿಲ್ಲಾಧಿಕಾರಿಗಳ ವರದಿಯನ್ವಯ ಸದರಿಯವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಕಾಯ್ದಿರಿಸಿ ಸದರಿಯವರನ್ನು ಮೇಲೆ ಓದಲಾದ ಕ್ರ.ಸಂ.(1)ರ ದಿನಾಂಕ:15.09.2004ರ ಆದೇಶದಲ್ಲಿ ಅಮಾನತ್ತುಗೊಳಿಸಲಾಗಿತ್ತು. ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:15.10.2004ರ ಪತ್ರದಲ್ಲಿ ಬಾಗಲಕೋಟೆ ಜಿಲ್ಲಾಧಿಕಾರಿಗಳು ದೋಷಾರೋಪಣೆ ಪಟ್ಟಿಯನ್ನು ಸರ್ಕಾರಕ್ಕೆ ಕಳುಹಿಸಿದ್ದರು. ಶ್ರೀ ಎಸ್.ಡಿ. ಫೀವಾರಿ ರವರ ವಿರುದ್ಧ ದೋಷಾರೋಪಣೆ ಪಟ್ಟಿಗಳನ್ನು (ಅನುಬಂಧ-1 ರಿಂದ 4ರವರೆಗೆ) ಮೇಲೆ ಕ್ರ.ಸಂ.3ರಲ್ಲಿ ಓದಲಾದ ದಿನಾಂಕ:02.12.2004ರ ಕಾರಣ ಕೇಳುವ ನೋಟೀಸ್‌ನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರು ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಸದರಿಯವರು ದಿನಾಂಕ:31.12.2004ರಂದು ಸಲ್ಲಿಸಿರುವ ಮನವಿಯಲ್ಲಿ ಅನುಬಂಧ-3ರ ದಾಖಲಾತಿ ನೀಡಲು ಕೋರಿದ್ದರು. ಈ ಬಗ್ಗೆ ಸರ್ಕಾರದ ದಿನಾಂಕ:08.12.2005ರ ಪತ್ರದಲ್ಲಿ ಅನುಬಂಧ-3ರ ದಾಖಲಾತಿಗಳ ಪ್ರತಿಗಳೆಲ್ಲವನ್ನು ಒದಗಿಸಲು ಸಾಧ್ಯವಿರುವುದಿಲ್ಲವಾದ್ದರಿಂದ ಕಂದಾಯ ಇಲಾಖೆಗೆ ಖುದ್ದಾಗಿ ಬಂದು ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲು ಹಾಗೂ ಇಲ್ಲಿ ಲಭ್ಯವಿಲ್ಲದ ದಾಖಲಾತಿಗಳನ್ನು ಸಂಬಂಧಿಸಿದ ತಾಲ್ಲೂಕು ಕಛೇರಿಯಲ್ಲಿ ಪರಿಶೀಲಿಸಿ ಲಿಖಿತ ಉತ್ತರವನ್ನು ಸಲ್ಲಿಸಲು 15 ದಿನಗಳ ಕಾಲಾವಕಾಶ ನೀಡಲಾಗಿತ್ತು. ಶ್ರೀ ಎಸ್.ಡಿ. ಫೀವಾರಿ ರವರು ಮೇಲೆ ಕ್ರ.ಸಂ.(4)ರ ದಿನಾಂಕ:21.12.2005ರಲ್ಲಿ ಸಲ್ಲಿಸಿರುವ ಲಿಖಿತ ಉತ್ತರದಲ್ಲಿ ಅವರ ಮೇಲಿನ ಆರೋಪಗಳನ್ನು ನಿರಾಕರಿಸಿ ಆರೋಪ ಮುಕ್ತರನ್ನಾಗಿಸಲು ಕೋರಿರುತ್ತಾರೆ. ಶ್ರೀ ಎಸ್.ಡಿ. ಫೀವಾರಿ ರವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಕಾಯ್ದಿರಿಸಿ ಮೇಲೆ ಕ್ರಮಸಂಖ್ಯೆ (5)ರಲ್ಲಿ ಓದಲಾದ ದಿನಾಂಕ:24.01.2005ರ ಆದೇಶದಲ್ಲಿ ಸದರಿಯವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಲಾಗಿತ್ತು.

ಶ್ರೀ ಎಸ್.ಡಿ. ಫೀವಾರಿ ರವರು ಸಲ್ಲಿಸಿದ ಲಿಖಿತ ಉತ್ತರಗಳನ್ನು ಪರಿಶೀಲಿಸಲಾಗಿ ಒಪ್ಪಲು ಸಮರ್ಪಕ ಅಂಶಗಳಿರುವುದಿಲ್ಲ. ಮತ್ತು ಅವರು ಆರೋಪಿತ ದುರ್ನಡತೆಗಳನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ. ಆದ್ದರಿಂದ ಅವರ ವಿರುದ್ಧ ಹೊರಡಿಸಲಾದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್.ಡಿ. 46 ಎಡಿಇ 2004, ಬೆಂಗಳೂರು, ದಿನಾಂಕ:21ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ 11 ರಡಿಯಲ್ಲಿ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ಡಿ. ಫೀವಾರಿ, ಹಿಂದಿನ ತಹಶೀಲ್ದಾರ್, ಬಾಗಲಕೋಟೆ ಹಾಗೂ ಕಾರ್ಯದರ್ಶಿ ಭೂ ನ್ಯಾಯಮಂಡಲಿ ಬಾಗಲಕೋಟೆ ಇವರು ಸೇವೆಯಿಂದ ಹಾಲಿ ನಿವೃತ್ತರಾಗಿರುವುದರಿಂದ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಸರ್ಕಾರವು ಶ್ರೀ ಎಸ್.ಎಸ್. ಧಾರವಾಡಕರ್ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.1 ಸೆಕ್ಟರ್ 33 ಒಲ್ಡ್ ಡಿ.ಸಿ. ರೆಸಿಡೆನ್ಸಿ, ನವನಗರ, ಬಾಗಲಕೋಟೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಾಗಲಕೋಟೆ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬಾಗಲಕೋಟೆ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 2005, ದಿನಾಂಕ:23.08.2005ರನ್ವಯ ವಿಚಾರಣಾಧಿಕಾರಿಗಳಿಗೆ ರೂ.6000-00 (ಆರು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:04.03.2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್) ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬಾಗಲಕೋಟೆ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 11 ಮತ್ತು 11ಎ ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಇಲಾಖಾ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. 1127

**ವಿಷಯ:** ಶ್ರೀ ಎ.ವಿ. ನಾಡಗೌಡ, ತಹಶೀಲ್ದಾರ್, ಮುದ್ದೇಬಿಹಾಳ ತಾಲ್ಲೂಕು ಹಾಗೂ ಶ್ರೀ ಎಂ.ಪಿ. ಚವ್ಹಾಣ ಹಿಂದಿನ ತಹಶೀಲ್ದಾರ್ ಮುದ್ದೇಬಿಹಾಳ ತಾಲ್ಲೂಕು, ಹಾಲಿ ತಹಶೀಲ್ದಾರ್ ಗೋಕಾಕ್ ತಾಲ್ಲೂಕು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:** 1. ಬಿಜಾಪುರ ಜಿಲ್ಲಾಧಿಕಾರಿಗಳ ಪತ್ರಸಂಖ್ಯೆ: ಆರ್.ಬಿ/ ಇಎಸ್‌ಟಿ/3 ಸಿಆರ್/ 40/04-05, ದಿನಾಂಕ:16.05.2005.

2. ದಿನಾಂಕ: 05.01.2006ರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆರ್.ಡಿ.42.ಎಡಿಇ:2006.

3. ಆಪಾದಿತ ನೌಕರರು ಕಾರಣ ಕೇಳುವ ನೋಟೀಸಿಗೆ ನೀಡಿದ ಲಿಖಿತ ಸಮಜಾಯಿಷಿ ಹೇಳಿಕೆ

(1) ಶ್ರೀ ಎಂ.ಪಿ. ಚವ್ಹಾಣ್, ದಿನಾಂಕ:30.01.2006.

(2) ಶ್ರೀ ಎ.ವಿ. ನಾಡಗೌಡ, ದಿನಾಂಕ:15.03.2006.

**ಪ್ರಸ್ತಾವನೆ:**

ಬಿಜಾಪುರ ತಾಲ್ಲೂಕು ಮುದ್ದೇಬಿಹಾಳ ತಾಲ್ಲೂಕಿನ ನ್ಯಾಯಾಲಯ ಪ್ರಕರಣ ಸಂಖ್ಯೆ: ಸಿಹೆಚ್‌ಎಸ್‌ಆರ್ 44/03-04ರಲ್ಲಿ ದಿನಾಂಕ:09.03.2004ರಂದು ನ್ಯಾಯ ನಡವಳಿಕೆಯನ್ನು ಪ್ರಾರಂಭಿಸಿ 9 ಜನ ಪಕ್ಷಗಾರರಿಗೆ ನೋಟೀಸ್ ನೀಡುವಾಗ ಯಾವುದೇ ನಿಯಮಗಳನ್ನು ಪಾಲಿಸದೇ ಹಾಗೂ ಎಫ್.ಐ.ಆರ್. ಮೇಲೆ ದಿನಾಂಕ ಹಾಗೂ ಸಮಯ ನಮೂದಿಸದೆ ನಿಯಮದ ವಿರುದ್ಧವಾಗಿ ಪ್ರಕರಣವನ್ನು ಪ್ರಾರಂಭಿಸಿ ಮುಂದುವರೆಸಿ ಕರ್ತವ್ಯ ಲೋಪವೆಸಗಿರುವ ಕಾರ್ಯನಿರ್ವಾಹಕ ದಂಡಾಧಿಕಾರಿಗಳ ಈ ಲೋಪದ ಬಗ್ಗೆ ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬಿಜಾಪುರ ಇವರು ಅವರ ಕಾರ್ಯಾಲಯದ ಪ್ರಕರಣ ಸಂಖ್ಯೆ: ಸಿಆರ್.ಪಿ. ನಂ.58/2004ರಲ್ಲಿ ದಿನಾಂಕ:18.11.2004ರಂದು ಹೊರಡಿಸಿದ ಆದೇಶದಲ್ಲಿ ಗಂಭೀರವಾಗಿ ಪರಿಗಣಿಸಿ ಸದರಿ ಕಾರ್ಯನಿರ್ವಾಹಕ ದಂಡಾಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ನಿರ್ದೇಶಿಸಿರುತ್ತಾರೆಂದು ಹಾಗೂ ಕೈಗೊಂಡ ಕ್ರಮದ ಬಗ್ಗೆ ನ್ಯಾಯಾಲಯಕ್ಕೆ ವರದಿ ಮಾಡಲು ಸೂಚಿಸಿದ್ದಾರೆಂದು ಈ ಕರ್ತವ್ಯ ಲೋಪ ಎಸಗಿದ ಕಾರಣಕ್ಕಾಗಿ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ:16.05.2005ರ ಪತ್ರದಲ್ಲಿ ಬಿಜಾಪುರ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

1) ಶ್ರೀ ಎಂ.ಪಿ. ಚವ್ಹಾಣ, ಹಿಂದಿನ ತಹಶೀಲ್ದಾರ್ ಮುದ್ದೇಬಿಹಾಳ ತಾಲ್ಲೂಕು ಹಾಲಿ ತಹಶೀಲ್ದಾರ್, ಗೋಕಾಕ್ ತಾಲ್ಲೂಕು.

2) ಶ್ರೀ ಎ.ವಿ. ನಾಡಗೌಡ, ತಹಶೀಲ್ದಾರ್ ಮುದ್ದೇಬಿಹಾಳ ತಾಲ್ಲೂಕು.

ಸದರಿ ಅಧಿಕಾರಿಗಳ ವಿರುದ್ಧದ ದೋಷಾರೋಪಣೆ ಪಟ್ಟಿಗಳನ್ನು (ಅನುಬಂಧ-1 ರಿಂದ 4 ರವರೆಗೆ) ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ದಿನಾಂಕ:05.01.2006ರ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರುಗಳ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಮೇಲೆ ಕ್ರ.ಸಂ.(3)ರ ದಿನಾಂಕ:30.01.2006 ಮತ್ತು 15.03.2006ರಲ್ಲಿ ಕ್ರಮವಾಗಿ ಶ್ರೀ ಎಂ.ಪಿ.ಚವ್ಹಾಣ ಮತ್ತು ಶ್ರೀ ಎ.ವಿ. ನಾಡಗೌಡ ರವರುಗಳು ಲಿಖಿತ ಸಮಜಾಯಿಷಿ ಹೇಳಿಕೆಯನ್ನು ಸಲ್ಲಿಸಿ ತಮ್ಮ ಆರೋಪಗಳನ್ನು ನಿರಾಕರಿಸಿದ್ದು ಒಪ್ಪಿಕೊಂಡಿರುವುದಿಲ್ಲ. ಹಾಗೂ ತಮ್ಮನ್ನು ಆರೋಪ ಮುಕ್ತರನ್ನಾಗಿಸಲು ಕೋರಿರುತ್ತಾರೆ. ಆಪಾದಿತರು ಸಲ್ಲಿಸಿರುವ ಲಿಖಿತ ಉತ್ತರಗಳನ್ನು ಪರಿಶೀಲಿಸಲಾಗಿ ಒಪ್ಪಲು ಸಮರ್ಪಕ ಅಂಶಗಳಿರುವುದಿಲ್ಲ ಮತ್ತು ಅವರುಗಳು ಆರೋಪಿತ ದುರ್ನಡತೆಗಳನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡುಬಂದಿರುತ್ತದೆ. ಆದ್ದರಿಂದ ಅವರ ವಿರುದ್ಧ ಹೊರಿಸಲಾದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಜಂಟಿ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್.ಡಿ.42.ಎ.ಡಿ.ಇ.2005, ಬೆಂಗಳೂರು, ದಿನಾಂಕ:20ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13 ರಡಿಯಲ್ಲಿ ಶ್ರೀ ಎ.ವಿ. ನಾಡಗೌಡ ಹಿಂದಿನ ತಹಶೀಲ್ದಾರ್ ಮುದ್ದೇಬಿಹಾಳ್ ಮತ್ತು ಹಾಲಿ ತಹಶೀಲ್ದಾರ್ ಮುದ್ದೇಬಿಹಾಳ ತಾಲ್ಲೂಕು ಮತ್ತು ಶ್ರೀ ಎಂ.ಪಿ. ಚವ್ಹಾಣ, ಹಿಂದಿನ ತಹಶೀಲ್ದಾರ್, ಮುದ್ದೇಬಿಹಾಳ್ ತಾಲ್ಲೂಕು ಹಾಲಿ ತಹಶೀಲ್ದಾರ್ ಗೋಕಾಕ್ ತಾಲ್ಲೂಕು ಇವರುಗಳ ವಿರುದ್ಧದ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಸರ್ಕಾರವು ಶ್ರೀ ಎಸ್.ಎನ್. ದಾರವಾಡಕರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ನಂ.1 ಸೆಕ್ಟರ್ 33 ಓಲ್ಡ್ ಡಿ.ಸಿ. ರೆಸಿಡೆನ್ಸಿ ನವನಗರ ಬಾಗಲಕೋಟೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿಜಾಪುರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬಿಜಾಪುರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16:ಸೇವಿಇ:2005, ದಿನಾಂಕ:23.08.2005ರನ್ವಯ ವಿಚಾರಣಾಧಿಕಾರಿಗಳಿಗೆ ರೂ.6000/- (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:04.03.2002ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬಿಜಾಪುರ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 11 ಮತ್ತು 11ಎ ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಇಲಾಖಾ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1128

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಸೈಯದ್ ಗೌಸ್ ಮೊಹಿದ್ದೀನ್ ತಹಶೀಲ್ದಾರ್ ನಿವೃತ್ತ ರವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಂಇ:36:ಎಡಿಇ:2001 ದಿನಾಂಕ:09.07.2001.

2. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ.36.ಎಡಿಇ:2001 ದಿನಾಂಕ:22.11.2002.
3. ಸರ್ಕಾರದ ಆದೇಶ ಸಂಖ್ಯೆ:ಆರ್.ಡಿ.36:ಎಡಿಇ:2001, ದಿನಾಂಕ:06.10.2004.
4. ದಿನಾಂಕ:06.10.2004ರ ಕಾರಣ ಕೇಳುವ ನೋಟೀಸ್ ಸಂಖ್ಯೆ:ಕಂಇ:36:ಎಡಿಇ:2001.
5. ಆಯುಕ್ತರು ವಾರ್ತಾ ಇಲಾಖೆ ರವರ ಪತ್ರ ಸಂಖ್ಯೆ: ವಾಇ:ವಾಪ್ರವಿಸಿ-2159, ದಿನಾಂಕ:24.12.2005.
6. ಆಯುಕ್ತರು ವಾರ್ತಾ ಇಲಾಖೆರವರ ಪತ್ರ ಸಂಖ್ಯೆ: ವಾಇ: ವಾಪ್ರದಿಸಿ:2005-06:5011, ದಿನಾಂಕ:23.02.2005.

**ಪ್ರಸ್ತಾವನೆ:**

ಶ್ರೀ ಸೈಯದ್‌ಗೌಸ್ ಮೊಹಿದ್ದೀನ್ ತಹಶೀಲ್ದಾರ್ ಹಾಲಿ ನಿವೃತ್ತಿ ರವರನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ:50:ಎಟಿಎಸ್:97, ದಿನಾಂಕ:11.02.1998ರನ್ವಯ ಕೃಷ್ಣಾ ಮೇಲ್ದಂಡೆ ಯೋಜನೆ ಬಾಗಲಕೋಟೆ ಎಂದು ನೇಮಕ ಮಾಡಿದ್ದು ಆದರೆ ಸದರಿ ಹುದ್ದೆಯ ಕರ್ತವ್ಯಕ್ಕೆ ಹಾಜರಾಗದೇ ಸರ್ಕಾರಕ್ಕೆ ಯಾವುದೇ ಕಾರಣಗಳನ್ನು ತಿಳಿಸದೇ ಅನಧಿಕೃತ ಗೈರುಹಾಜರಾಗಿರುವುದು ಹಾಗೂ ವಿವಿಧ ದಿನಾಂಕಗಳಂದು ವರ್ಗಾವಣೆ ಮಾಡಿರುವ ಜಾಗದಲ್ಲಿ ಕರ್ತವ್ಯಕ್ಕೆ ಹಾಜರಾಗದೆ ಸುಮಾರು 2 ವರ್ಷಗಳಿಂದಲೂ ಕಾಲ ಕಳೆಯುತ್ತಿದ್ದ ಹಿನ್ನೆಲೆಯಲ್ಲಿ ಸದರಿ ಆರೋಪಿತ ಅಧಿಕಾರಿಯು ಸರ್ಕಾರದ ಸೂಚನೆಗಳನ್ನು ಪಾಲಿಸದೇ ಉಲ್ಲಂಘಿಸಿರುವುದು ಸ್ಪಷ್ಟವಾಗಿ ಕಂಡು ಬಂದಿದ್ದರಿಂದ ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ದಿನಾಂಕ:09.07.2001ರ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ನಂತರ ಸರ್ಕಾರವು ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ದಿನಾಂಕ:22.11.2002ರ ಆದೇಶದಲ್ಲಿ ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅವರ ಅಮಾನತ್ತು ಆದೇಶವನ್ನು ರದ್ದುಗೊಳಿಸಲಾಗಿದೆ. ಶ್ರೀ ಸೈಯದ್‌ಗೌಸ್ ಮೊಹಿದ್ದೀನ್ ರವರು ದಿನಾಂಕ:31.05.2004ಕ್ಕೆ ವಯೋನಿವೃತ್ತಿಯಾಗಿರುವುದರಿಂದ ಸದರಿಯವರ ವಿರುದ್ಧದ ಆರೋಪಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರನ್ವಯ ಇಲಾಖಾ ವಿಚಾರಣೆ ಪ್ರಾರಂಭಿಸಲು ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ದಿನಾಂಕ:06.10.2004ರ ಆದೇಶದಲ್ಲಿ ಆದೇಶಿಸಲಾಗಿದೆ.

ಶ್ರೀ ಸೈಯದ್‌ಗೌಸ್ ಮೊಹಿದ್ದೀನ್ ನಿವೃತ್ತ ತಹಶೀಲ್ದಾರವರ ವಿರುದ್ಧದ ದೋಷಾರೋಪಣೆ ಪಟ್ಟಿಗಳನ್ನು (ಅನುಬಂಧ-1 ರಿಂದ 4 ರವರೆಗೆ) ಮೇಲೆ ಕ್ರ.ಸಂ.(4)ರಲ್ಲಿ ಓದಲಾದ ದಿನಾಂಕ:06.10.2004ರ ಕಾರಣ ಕೇಳುವ ನೋಟೀಸಿನೊಂದಿಗೆ ಅವರು ನೀಡಿದ್ದ ವಿಳಾಸಕ್ಕೆ ಅಂಚೆ ನೊಂದಣಿ ಸ್ವೀಕೃತಿ ಪತ್ರದ ಮೂಲಕ ಕಳುಹಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಸದರಿ ಅಂಚೆಯು ಬಟವಾಡೆಯಾಗದೆ ಸರ್ಕಾರಕ್ಕೆ ಹಿಂತಿರುಗಿ ಬಂದಿರುತ್ತದೆ. ಸರ್ಕಾರದ ದಿನಾಂಕ:07.12.2004ರ ಪತ್ರದಲ್ಲಿ ಶ್ರೀ ಸೈಯದ್‌ಗೌಸ್ ಮೊಹಿದ್ದೀನ್ ನಿವೃತ್ತ ತಹಶೀಲ್ದಾರವರ ವಿಳಾಸವನ್ನು ಪತ್ತೆ ಮಾಡಿ ದಿನಾಂಕ:06.10.2004ರ ಕಾರಣಕೇಳುವ ನೋಟೀಸನ್ನು ಜಾರಿ ಮಾಡಲು ಬೆಂಗಳೂರು ಜಿಲ್ಲಾಧಿಕಾರಿಗಳಿಗೆ ತಿಳಿಸಲಾಗಿತ್ತು. ಈ ಬಗ್ಗೆ ಬೆಂಗಳೂರು ಜಿಲ್ಲಾಧಿಕಾರಿಗಳು ದಿನಾಂಕ:12.04.2005ರ ಪತ್ರದಲ್ಲಿ ಶ್ರೀ ಸೈಯದ್‌ಗೌಸ್ ಮೊಹಿದ್ದೀನ್ ನಿವೃತ್ತ ತಹಶೀಲ್ದಾರರವರು ಹಾಲಿ ತಿಳಿಸಿರುವ ವಿಳಾಸಲ್ಲಿ ವಾಸವಾಗಿರುವುದಿಲ್ಲವೆಂದು ರಾಜಸ್ವ ನಿರೀಕ್ಷಕರ ಮಹಜರನೊಂದಿಗೆ ಸರ್ಕಾರಕ್ಕೆ ವರದಿ ಮಾಡಿರುತ್ತಾರೆ. ಸರ್ಕಾರದ ದಿನಾಂಕ:05.08.2005ರ ಪತ್ರದಲ್ಲಿ ಆಪಾದಿತ ನಿವೃತ್ತ ಅಧಿಕಾರಿಯವರ ವಾಸಸ್ಥಳದ ವಿಳಾಸ ನೀಡುವಂತೆ ಮಹಾಲೇಖಪಾಲರನ್ನು ಕೋರಲಾಗಿತ್ತು. ಸದರಿಯವರು ನಿವೃತ್ತರಾದ ನಂತರದ ವಿಳಾಸವು ಸರ್ಕಾರಕ್ಕಾಗಲಿ ಕರ್ನಾಟಕ ಮಹಾಲೇಖಪಾಲರ ಕಛೇರಿಗಾಗಲಿ ಹಾಗೂ ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಗಾಗಲಿ ತಿಳಿದಿಲ್ಲವಾದ್ದರಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 28 ಎ(2)ರ ಪ್ರಕಾರ ದಿನಾಂಕ:06.10.2004ರ ಕಾರಣಕೇಳುವ ನೋಟೀಸನ್ನು ಎರಡು ಪ್ರಮುಖ ದಿನ ಪತ್ರಿಕೆಗಳಲ್ಲಿ ಪ್ರಕಟಿಸಲು ಹಾಗೂ ಪ್ರಕಟಿಸಿದ ಪತ್ರಿಕೆಗಳ ಉದ್ಧೃತ ಭಾಗಗಳನ್ನು ಕಳುಹಿಸಿಕೊಡಲು ದಿನಾಂಕ:06.12.2005ರ ಪತ್ರದಲ್ಲಿ ಆಯುಕ್ತರು ವಾರ್ತಾ ಇಲಾಖೆ ರವರನ್ನು ಕೋರಲಾಗಿತ್ತು. ಈ ಬಗ್ಗೆ ಮೇಲೆ ಕ್ರಮಸಂಖ್ಯೆ:5ರಲ್ಲಿ ಓದಲಾದ ಪತ್ರದಲ್ಲಿ ಕನ್ನಡಪ್ರಭ ಮತ್ತು ವಿಜಯ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಿಸಲು ಆ ಪತ್ರಿಕೆಯ ಜಾಹಿರಾತು ವ್ಯವಸ್ಥಾಪಕರನ್ನು ಆಯುಕ್ತರು ವಾರ್ತಾ ಇಲಾಖೆ ರವರು ಕೋರಿರುತ್ತಾರೆ. ಶ್ರೀ ಸೈಯದ್‌ಗೌಸ್ ಮೊಹಿದ್ದೀನ್ ನಿವೃತ್ತ ತಹಶೀಲ್ದಾರ್ ಅವರ ಕಾರಣ ಕೇಳುವ ನೋಟೀಸನ್ನು ಕನ್ನಡಪ್ರಭ ಪತ್ರಿಕೆಯು ದಿನಾಂಕ:31.12.2005ರ ಸಂಚಿಕೆಯಲ್ಲಿ ಪ್ರಕಟಿಸಿರುವುದಾಗಿ ಸದರಿ ಪ್ರಕಟಣಾ ವರದಿಯನ್ನು ಮೇಲೆ ಕ್ರಮಸಂಖ್ಯೆ 6ರಲ್ಲಿ ಓದಲಾದ ದಿನಾಂಕ:23.02.2006ರ ಪತ್ರದಲ್ಲಿ ಆಯುಕ್ತರು ವಾರ್ತಾ ಇಲಾಖೆರವರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ದಿನಾಂಕ:06.10.2004ರ ಕಾರಣ ಕೇಳುವ ನೋಟೀಸ್ ದಿನಾಂಕ:23.02.2005ರ ಕನ್ನಡ ಪ್ರಭ ದಿನಪತ್ರಿಕೆಯಲ್ಲಿ ಪ್ರಕಟಗೊಂಡ ನಂತರ ಸಾಕಷ್ಟು ಸಮಯದ ನಂತರವೂ ಶ್ರೀ ಸೈಯದ್‌ಗೌಸ್ ಮೊಹಿದ್ದೀನ್ ರವರು ತಮ್ಮ ಲಿಖಿತ ಸಮಜಾಯಿಷಿಯನ್ನು ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ. ಸದರಿಯವರು ಆರೋಪಿತ ದುರ್ನಡತೆಗಳನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡುಬಂದಿರುತ್ತದೆ. ಆದ್ದರಿಂದ ಅವರ ವಿರುದ್ಧ ಹೊರಡಿಸಲಾದ ಆರೋಪಗಳ ಸತ್ಯಾಸತ್ಯಾತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ.36.ಎ.ಡಿ.ಇ.2001, ಬೆಂಗಳೂರು, ದಿನಾಂಕ:20ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಹಾಗೂ ಶ್ರೀ ಸೈಯದ್‌ಗೌಸ್ ಮೊಹಿದ್ದೀನ್, ಹಿಂದಿನ ತಹಶೀಲ್ದಾರ್, ಇವರು ಸೇವೆಯಿಂದ ಹಾಲಿ ನಿವೃತ್ತರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಸರ್ಕಾರವು ಶ್ರೀ ಎಸ್.ಎಸ್. ಸಂಗೊಳ್ಳಿ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.415/2, ಎಫ್. ಬ್ಲಾಕ್ ಸಹಕಾರನಗರ, ಬೆಂಗಳೂರು-92 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16:ಸೇವಿಇ:2005, ದಿನಾಂಕ:23.08.2005ರನ್ವಯ ವಿಚಾರಣಾಧಿಕಾರಿಗಳಿಗೆ ರೂ.6000/- (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:04.03.2002ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬಾಗಲಕೋಟೆ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 11 ಮತ್ತು 11ಎ ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಇಲಾಖಾ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1129 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಎಂ.ಸಿ. ಕಿನ್ನಾಳ, ತಹಶೀಲ್ದಾರ್, ಶಿರಹಟ್ಟಿ (ನಿವೃತ್ತ) ಮತ್ತಿತರರ ವಿರುದ್ದದ ಲೋಕಾಯುಕ್ತ ಪ್ರಕರಣ, ಜಂಟಿ ಇಲಾಖಾ ವಿಚಾರಣೆ-ಆರೋಪ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ.32.ಎಡಿಇ:2003 ದಿನಾಂಕ:26.03.2004.

2. ಕರ್ನಾಟಕ ಲೋಕಾಯುಕ್ತರ ಆದೇಶ ಸಂಖ್ಯೆ:LOK/INQ/14-A/A/2004-05, ದಿನಾಂಕ:21.04.2004.

3. ಕರ್ನಾಟಕ ಲೋಕಾಯುಕ್ತರ ಪತ್ರದ ಸಂಖ್ಯೆ:LOK/ARE-1/ENQ-2/ 2004-05, ದಿನಾಂಕ:21.01.2006.

**ಪ್ರಸ್ತಾವನೆ:**

ಗದಗ್ ಜಿಲ್ಲೆಯ ಶಿರಹಟ್ಟಿ ತಾಲ್ಲೂಕಿನ ಸುರನಗಿ ಗ್ರಾಮದ ಸರ್ವೆ ನಂ.63ರಲ್ಲಿ ಕರ್ನಾಟಕ ಭೂ ಕಂದಾಯ ಅಧಿನಿಯಮ ಹಾಗೂ ಸಂಬಂಧಿಸಿದ ನಿಯಮಗಳನ್ನು ಉಲ್ಲಂಘಿಸಿ, ಜಮೀನಿನ ಪೋಡಿ ಸರ್ವೆ ಮಾಡಿರುವ ಬಗ್ಗೆ ಈ ಕೆಳಕಂಡ ಅಧಿಕಾರಿ/ ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಲು ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ಪ್ರಕರಣವನ್ನು ಮಾನ್ಯ ಲೋಕಾಯುಕ್ತರಿಗೆ ವಹಿಸಿಕೊಡಲಾಗಿತ್ತು.

1. ಶ್ರೀ ಎಂ.ಸಿ. ಕಿನ್ನಾಳ್, ತಹಶೀಲ್ದಾರ್, ಶಿರಹಟ್ಟಿ (ಈಗ ನಿವೃತ್ತಿ)
2. ಶ್ರೀ ಎಸ್.ಕೆ. ಪಾಟೀಲ್, ತಹಶೀಲ್ದಾರ್, ಹಾವೇರಿ ತಾಲ್ಲೂಕು.
3. ಶ್ರೀ ಎಂ.ಪಿ. ಕಾತೂರ್, ಉಪ ತಹಶೀಲ್ದಾರ್, ಲಕ್ಷ್ಮೇಶ್ವರ (ಈಗ ನಿವೃತ್ತಿ)
4. ಶ್ರೀ ರೇವಣಸಿದ್ದಪ್ಪ, ಭೂ ದಾಖಲೆಗಳ ಸಹಾಯಕ ನಿರ್ದೇಶಕರು, ಗದಗ.
5. ಶ್ರೀ ಎಸ್.ಎನ್. ಬಾರಿಕೇರ, ಕಂದಾಯ ನಿರೀಕ್ಷಕರು, ಲಕ್ಷ್ಮೇಶ್ವರ.
6. ಶ್ರೀ ಸಿ.ಎಂ. ಹೊಸಕೋಟೆ, ಕಂದಾಯ ನಿರೀಕ್ಷಕರು, ಲಕ್ಷ್ಮೇಶ್ವರ.
7. ಶ್ರೀ ಎಸ್.ವಿ. ಆಗಡಿ, ಕಂದಾಯ ನಿರೀಕ್ಷಕರು, ದುಮ್ಮನವಾಡಿ, ಕಲಘಟಗಿ ತಾಲ್ಲೂಕು.
8. ಶ್ರೀ ತುರಕಗೋಳ, ಗ್ರಾಮ ಲೆಕ್ಕಿಗ, ಸುರನಗಿ.
9. ಶ್ರೀ ಎಸ್.ವಿ. ನರಗುಂದ, ಭೂದಾಖಲೆಗಳ ಸಹಾಯಕ ನಿರ್ದೇಶಕರು, ಸವಣೂರು (ನಿವೃತ್ತಿ).

ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಕರ್ನಾಟಕ ಲೋಕಾಯುಕ್ತರ ಆದೇಶದಲ್ಲಿ Additional Registrar, Enquiries-1, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರನ್ನು ಈ ಪ್ರಕರಣದ ಇಲಾಖಾ ವಿಚಾರಣೆಯನ್ನು ಜರುಗಿಸಲು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರಂತೆ ವಿಚಾರಣಾಧಿಕಾರಿಯವರು ಈ ಪ್ರಕರಣದ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಿರುತ್ತಾರೆ. ಕ್ರ.ಸಂ.3ರಲ್ಲಿ ಓದಲಾದ ದಿನಾಂಕ:21.01.2006ರ ತಮ್ಮ ಪತ್ರದೊಂದಿಗೆ ಮಾನ್ಯ ಲೋಕಾಯುಕ್ತರು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಅದರಲ್ಲಿ ಮೇಲ್ಕಂಡ 9 ಅಧಿಕಾರಿ/ ನೌಕರರ ವಿರುದ್ಧ ಮಾಡಲಾಗಿರುವ ಆರೋಪಗಳು ಸಾಬೀತಾಗಿಲ್ಲವೆಂದು ವರದಿ ಮಾಡಿರುತ್ತಾರೆ. ಹಾಗೂ ಅವರುಗಳನ್ನು ಆರೋಪದಿಂದ ಮುಕ್ತ ಮಾಡುವುದು ಅವಶ್ಯವೆಂದು ತಿಳಿಸಿರುತ್ತಾರೆ.

ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿದ್ದ ವಿಚಾರಣಾ ವರದಿಯನ್ನು ಪರಿಶೀಲಿಸಿದ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಮೇಲ್ಕಂಡ 9 ಅಧಿಕಾರಿ/ ನೌಕರರ ವಿರುದ್ದದ ಆರೋಪಗಳು ಸಾಬೀತಾಗದಿರುವುದು ಸ್ಪಷ್ಟವಾಗಿರುವುದರಿಂದ ಅವರುಗಳನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 32 ಎಡಿಇ 2003, ಬೆಂಗಳೂರು, ದಿನಾಂಕ:26ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ಕೂಲಂಕುಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಅಧಿಕಾರಿ/ ನೌಕರರನ್ನು ಅವರ ವಿರುದ್ಧ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಲಾಗಿದೆ.

1. ಶ್ರೀ ಎಂ.ಸಿ. ಕಿನ್ನಾಳ್, ತಹಶೀಲ್ದಾರ್, ಶಿರಹಟ್ಟಿ (ನಿವೃತ್ತರು).
2. ಶ್ರೀ ಎಸ್.ಕೆ. ಪಾಟೀಲ್, ತಹಶೀಲ್ದಾರ್, ಹಾವೇರಿ ತಾಲ್ಲೂಕು, ಪ್ರಸ್ತುತ ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗದಗ್.
3. ಶ್ರೀ ಎಂ.ಪಿ. ಕಾತೂರ್, ಉಪ ತಹಶೀಲ್ದಾರ್, ಲಕ್ಷ್ಮೇಶ್ವರ (ನಿವೃತ್ತರು).
4. ಶ್ರೀ ರೇವಣಸಿದ್ದಪ್ಪ, ಭೂ ದಾಖಲೆಗಳ ಸಹಾಯಕ ನಿರ್ದೇಶಕರು, ಗದಗ.
5. ಶ್ರೀ ಎಸ್.ಎನ್. ಬಾರಿಕೇರ, ಕಂದಾಯ ನಿರೀಕ್ಷಕರು, ಲಕ್ಷ್ಮೇಶ್ವರ.
6. ಶ್ರೀ ಸಿ.ಎಂ. ಹೊಸಕೋಟೆ, ಕಂದಾಯ ನಿರೀಕ್ಷಕರು, ಲಕ್ಷ್ಮೇಶ್ವರ.
7. ಶ್ರೀ ಎಸ್.ವಿ. ಆಗಡಿ, ಕಂದಾಯ ನಿರೀಕ್ಷಕರು, ದುಮ್ಮನವಾಡಿ, ಕಲಘಟಗಿ ತಾಲ್ಲೂಕು.
8. ಶ್ರೀ ತುರಕಗೋಳ, ಗ್ರಾಮ ಲೆಕ್ಕಿಗ, ಸುರನಗಿ.
9. ಶ್ರೀ ಎಸ್.ವಿ. ನರಗುಂದ, ಭೂದಾಖಲೆಗಳ ಸಹಾಯಕ ನಿರ್ದೇಶಕರು, ಸವಣೂರು (ನಿವೃತ್ತರು).

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ, ಮೇಲ್ಕಂಡ ಅಧಿಕಾರಿ/ ನೌಕರರ ವಿರುದ್ಧ ಈ ಜಂಟಿ ಇಲಾಖಾ ವಿಚಾರಣೆಯು ನಡೆಯದಿದ್ದಲ್ಲಿ ಅವರು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1130 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಅಲ್ಲಾಭಕ್ಷ ಹಿಂದಿನ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು ಹಾಲಿ ನಿವೃತ್ತಿ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ.32.ಎಡಿಇ:2004, ದಿನಾಂಕ:15.05.2004.

2. ಕೇಂದ್ರ ಸ್ಥಾನಿಕ ಸಹಾಯಕರು ಜಿಲ್ಲಾಧಿಕಾರಿಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರ ಅ.ಸ. ಪತ್ರ ಸಂಖ್ಯೆ:ಇಎಸ್‌ಟಿ(2) ಸಿಸಿಎ4/ 04-05, ದಿನಾಂಕ:21.04.2005.

3. ಸರ್ಕಾರದ ಆದೇಶ ಸಂಖ್ಯೆ: ಕಂಇ 32:ಎಡಿಇ:2004, ದಿನಾಂಕ:12.09.2005.

4. ದಿನಾಂಕ:12.09.2005ರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆರ್‌ಡಿ.32.ಎಡಿಇ:2004.

5. ಶ್ರೀ ಅಲ್ಲಾಭಕ್ಷ ನಿವೃತ್ತ ತಹಶೀಲ್ದಾರ್‌ರವರ ದಿನಾಂಕ:05.01.2006ರ ಹೇಳಿಕೆ.

**ಪ್ರಸ್ತಾವನೆ:**

ಶ್ರೀ ಅಲ್ಲಾಭಕ್ಷ ಹಿಂದಿನ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು (ಹಾಲಿ ನಿವೃತ್ತ) ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಅಧಿಕಾರ ವ್ಯಾಪ್ತಿ ಮೀರಿ ಅಕ್ರಮವಾಗಿ ಖಾತೆ ಬದಲಾವಣೆಗಳನ್ನು ಮಾಡಿರುವ ಹಿನ್ನೆಲೆಯಲ್ಲಿ ಅವರ ಈ ಕ್ರಮವನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ ಅವರ ವಿರುದ್ಧ ಇಲಾಖೆ ವಿಚಾರಣೆ ಹೂಡುವುದನ್ನು ಕಾಯ್ದಿರಿಸಿ ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:15.05.2004ರ ಆದೇಶದಲ್ಲಿ ಸದರಿಯವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:21.04.2005ರ ಅ.ಸ. ಪತ್ರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು ದೋಷಾರೋಪಣೆ ಪಟ್ಟಿಯನ್ನು (ಅನುಬಂಧ 1 ರಿಂದ 4ರವರೆಗೆ) ಸರ್ಕಾರಕ್ಕೆ ಕಳುಹಿಸಿಕೊಟ್ಟಿದ್ದರು. ಶ್ರೀ ಅಲ್ಲಾಭಕ್ಷ ರವರು ದಿನಾಂಕ:31.05.2004ರಂದು ಸೇವೆಯಿಂದ ವಯೋನಿವೃತ್ತರಾಗಿರುವುದರಿಂದ ಸದರಿಯವರು ದೇವನಹಳ್ಳಿ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸಿದ ಅವಧಿಯ ಸಾಧಹಳ್ಳಿ ಗ್ರಾಮದ ಸರ್ವೆ ನಂ.238, 239 ಮತ್ತು 240 ರ ಜಮೀನು ಖಾತೆ ಬದಲಾವಣೆಗೆ ತಮ್ಮ ಅಧಿಕಾರ ವ್ಯಾಪ್ತಿ ಮೀರಿ ಆದೇಶ ಹೊರಡಿಸಿರುವ ಬಗ್ಗೆ ಇವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಸರ್ಕಾರವು ಭಾವಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿ ಇಲಾಖಾ ವಿಚಾರಣೆ ಪ್ರಾರಂಭಿಸಲು ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ದಿನಾಂಕ:12.09.2005ರ ಆದೇಶದಲ್ಲಿ ಆದೇಶಿಸಿದೆ.

ಶ್ರೀ ಅಲ್ಲಾಭಕ್ಷ ರವರ ವಿರುದ್ಧದ ದೋಷಾರೋಪಣೆ ಪಟ್ಟಿಗಳನ್ನು (ಅನುಬಂಧ 1 ರಿಂದ 4 ರವರೆಗೆ) ಮೇಲೆ ಕ್ರ.ಸಂ.(4)ರಲ್ಲಿ ಓದಲಾದ ದಿನಾಂಕ:12.09.2005ರ ಕಾರಣ ಕೇಳುವ ನೋಟೀಸ್‌ನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಸದರಿಯವರು ದಿನಾಂಕ:04.10.2005ರಂದು ಸಲ್ಲಿಸಿರುವ ಮನವಿಯಲ್ಲಿ ಅನುಬಂಧ-3ರ ದಾಖಲಾತಿ ನೀಡಲು ಕೋರಿದ್ದರು. ಈ ಬಗ್ಗೆ ಸರ್ಕಾರದ ದಿನಾಂಕ:21.12.2005ರ ಹಿಂಬರಹದಲ್ಲಿ ಅನುಬಂಧ-3ರ ದಾಖಲಾತಿಗಳ ಪ್ರತಿಗಳೆಲ್ಲವನ್ನು ಒದಗಿಸಲು ಸಾಧ್ಯವಿರುವುದಿಲ್ಲವಾದ್ದರಿಂದ ಮೂಲ ದಾಖಲಾತಿಗಳನ್ನು ಕಛೇರಿಗೆ ಖುದ್ದಾಗಿ ಬಂದು ಪರಿಶೀಲಿಸಿ ಟಿಪ್ಪಣಿ ಗುರ್ತಿಸಿಕೊಂಡು ಹಿಂಬರಹ ತಲುಪಿದ ಹತ್ತು ದಿನಗಳೊಳಗಾಗಿ ದಿನಾಂಕ:12.09.2005ರ ಕಾರಣ ಕೇಳುವ ನೋಟೀಸಿಗೆ ಉತ್ತರಿಸಲು ಕಾಲಾವಕಾಶವನ್ನು ನೀಡಲಾಗಿತ್ತು. ಅದರಂತೆ ಶ್ರೀ ಅಲ್ಲಾಭಕ್ಷ ರವರು ದಿನಾಂಕ:02.01.2006ರಂದು ಕಛೇರಿಗೆ ಭೇಟಿ ನೀಡಿ ದಾಖಲೆಗಳನ್ನು ಪರಿಶೀಲಿಸಿರುತ್ತಾರೆ.

ಶ್ರೀ ಅಲ್ಲಾಭಕ್ಷ ರವರು ಮೇಲೆ ಕ್ರಮಸಂಖ್ಯೆ (5)ರ ದಿನಾಂಕ:05.01.2006ರಲ್ಲಿ ಲಿಖಿತ ಉತ್ತರದಲ್ಲಿ ಅವರ ಮೇಲಿನ ಆಪಾದನೆಗಳನ್ನು ಅಲ್ಲಗಳೆದು ಯಾವ ದುರ್ನಡತೆಗಳನ್ನು ಎಸಗಿರುವುದಿಲ್ಲವೆಂದು ತಿಳಿಸಿ ತಮ್ಮನ್ನು ಆರೋಪ ಮುಕ್ತರನ್ನಾಗಿಸಲು ಕೋರಿರುತ್ತಾರೆ.

ಶ್ರೀ ಅಲ್ಲಾಭಕ್ಷ ರವರು ಸಲ್ಲಿಸಿದ ಲಿಖಿತ ಉತ್ತರಗಳನ್ನು ಪರಿಶೀಲಿಸಲಾಗಿ ಒಪ್ಪಲು ಸಮರ್ಪಕ ಅಂಶಗಳು ಇರುವುದಿಲ್ಲ ಮತ್ತು ಅವರು ಆರೋಪಿತ ದುರ್ನಡತೆಗಳನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡುಬಂದಿರುತ್ತದೆ. ಆದ್ದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ32.ಎಡಿಇ:2004, ಬೆಂಗಳೂರು, ದಿನಾಂಕ:21ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಹಾಗೂ ಶ್ರೀ ಅಲ್ಲಾಭಕ್ಷ, ಹಿಂದಿನ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು ಇವರು ಸೇವೆಯಿಂದ ಹಾಲಿ ನಿವೃತ್ತರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಸರ್ಕಾರವು ಶ್ರೀ ಟಿ.ಎಸ್.ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ನಂ.1171 (ಹೆಚ್‌ಟಿಜಿ) 10ನೇ ಬಿ. ಕ್ರಾಸ್, ಯಲಹಂಕ ನ್ಯೂ ಟೌನ್, ಬೆಂಗಳೂರು-560064 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರು/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ:16:ಸೇವಿಇ: 2005, ದಿನಾಂಕ:23.08.2005ರನ್ವಯ ವಿಚಾರಣಾಧಿಕಾರಿಗಳಿಗೆ ರೂ.6000/-(ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:04.03.2002ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬಾಗಲಕೋಟೆ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 11 ಮತ್ತು 11ಎ ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಇಲಾಖಾ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. 1131

**ವಿಷಯ:** ಶ್ರೀ ಎಂ.ವಿ. ಲಕ್ಷ್ಮೀಪತಿರೆಡ್ಡಿ, ಹಿಂದಿನ ತಹಶೀಲ್ದಾರ್, ಶಿರಾ ತಾಲ್ಲೂಕು, ಇವರು ಚುನಾವಣಾ ಸಹಾಯ ಧನವನ್ನು ದುರುಪಯೋಗಪಡಿಸಿಕೊಂಡ ಬಗ್ಗೆ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:** 1. ವಿಚಾರಣಾಧಿಕಾರಿಗಳ ವರದಿ ದಿನಾಂಕ:16.03.2005.

2. ಎರಡನೇ ಕಾರಣ ಕೇಳುವ ನೋಟಿಸ್ ಸಂಖ್ಯೆ:ಆರ್‌ಡಿ 30 ಎಡಿಇ 2003 ದಿನಾಂಕ:12.12.2005.

3. ಶ್ರೀ ಎಂ.ವಿ. ಲಕ್ಷ್ಮೀಪತಿರೆಡ್ಡಿ, ನಿವೃತ್ತ ತಹಶೀಲ್ದಾರ್, ಇವರ ಉತ್ತರ ದಿನಾಂಕ:16.01.2006.

4. ಶಿರಾ ತಾಲ್ಲೂಕು ತಹಶೀಲ್ದಾರ್ ಇವರ ಪತ್ರ ಸಂಖ್ಯೆ:22(ಶಿ) ವಿದ 3:02-03, ದಿನಾಂಕ:16.05.2006.

**ಪ್ರಸ್ತಾವನೆ:**

ಶ್ರೀ ಎಂ.ವಿ. ಲಕ್ಷ್ಮೀಪತಿರೆಡ್ಡಿ, ಹಿಂದಿನ ತಹಶೀಲ್ದಾರ್, ಶಿರಾ ತಾಲ್ಲೂಕು, ಇವರು ಶಿರಾ ತಾಲ್ಲೂಕು ತಹಶೀಲ್ದಾರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ ಆ ಅವಧಿಯಲ್ಲಿ ನಡೆದ ಲೋಕಸಭಾ ಹಾಗೂ ವಿಧಾನ ಸಭಾ ಸಾರ್ವತ್ರಿಕ ಚುನಾವಣೆಗಳ ವೆಚ್ಚಕ್ಕಾಗಿ ಬಿಡುಗಡೆಗೊಳಿಸಲಾದ ಮೊತ್ತದಲ್ಲಿ ಅಂಗೀಕೃತಗೊಂಡ ಮೊತ್ತವನ್ನು ಸರ್ಕಾರಕ್ಕೆ ಜಮೆ ಮಾಡದೆ ಸರ್ಕಾರಿ ಹಣ ದುರುಪಯೋಗಪಡಿಸಿಕೊಂಡ ಬಗ್ಗೆ ಹಾಗೂ ಇನ್ನಿತರೆ ಆಪಾದನೆ ಮೇಲೆ ಇಲಾಖಾ ವಿಚಾರಣೆ ಜರುಗಿಸಿ ಮೇಲೆ ಓದಲಾದ (1)ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣ ವರದಿಯನ್ನು ಸರ್ಕಾರಕ್ಕೆ ಒಪ್ಪಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಈ ಆಪಾದಿತ ಅಧಿಕಾರಿಯ ವಿರುದ್ಧ ಮಾಡಲಾದ 3 ಆರೋಪಗಳಲ್ಲಿ 2 ಆರೋಪಗಳು ರುಜುವಾತು ಆಗಿರುವುದಿಲ್ಲ. ಮತ್ತು 3ನೇ ಆರೋಪದಲ್ಲಿ ಆಪಾದಿತರು ರೂ.1,476/- ಅನ್ನು ಕಟ್ಟಬೇಕು ಎನ್ನುವ ಅಂಶವು ರುಜುವಾತಾಗಿರುತ್ತದೆ ಎಂದು ವರದಿ ನೀಡಿದ್ದರ ಹಿನ್ನೆಲೆಯಲ್ಲಿ ಸದರಿಯವರಿಗೆ ಮೇಲೆ ಓದಲಾದ (2)ರಲ್ಲಿ ಎರಡನೇ ಕಾರಣ ಕೇಳುವ ನೋಟೀಸು ನೀಡಲಾಗಿತ್ತು.

ಸದರಿ ಅಧಿಕಾರಿಗಳು ಮೇಲೆ ಓದಲಾದ (3)ರಲ್ಲಿ ಉತ್ತರ ನೀಡುತ್ತಾ ವಿಚಾರಣಾಧಿಕಾರಿಗಳ ವರದಿ ಅನ್ವಯ ರೂ.1,4767/-ಗಳನ್ನು ಡಿ.ಡಿ. ಮುಖೇನ ದಿನಾಂಕ:17.01.2006ರಂದು ತಹಶೀಲ್ದಾರ್, ಶಿರಾ ಇವರಿಗೆ ಕಳುಹಿಸಿರುವುದಾಗಿ ತಿಳಿಸುತ್ತಾ ತಮ್ಮ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತಗೊಳಿಸಲು ಕೋರಿರುತ್ತಾರೆ.

ಈ ಬಗ್ಗೆ ಮೇಲೆ ಓದಲಾದ ಕ್ರ.ಸಂ.(4)ರಲ್ಲಿನ ಪತ್ರದಲ್ಲಿ ತಹಶೀಲ್ದಾರ್, ಶಿರಾ ತಾಲ್ಲೂಕು ಇವರು ಡಿ.ಡಿ. ಹಣ ರೂ.1,476/- ಅನ್ನು ದಿನಾಂಕ:15.05.2006ರಂದು ಚಲನ್ ಸಂಖ್ಯೆ 33ರ ರೀತ್ಯ ಎಸ್.ಬಿ.ಎಂ. ಶಿರಾ ಇಲ್ಲಿಗೆ ಸರ್ಕಾರದ ರಾಜ್ಯ ಚುನಾವಣಾ ಸ್ವೀಕೃತಿ ಲೆಕ್ಕ ಶೀರ್ಷಿಕೆ 0515-ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-00-800- ಇತರೆ ಜಮೆ-0-03 ಇತರೆ ಬಾಬುಗಳು ಇದಕ್ಕೆ ಜಮಾ ಮಾಡಲಾಗಿದೆ ಎಂದು ತಿಳಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಆಪಾದಿತ ಅಧಿಕಾರಿಯು ರೂ.1,476/- (ರೂ. ಒಂದು ಸಾವಿರದ ನಾಲ್ಕು ನೂರ ಎಪ್ಪತ್ತಾರುಗಳು ಮಾತ್ರ), ದಿನಾಂಕ:27.06.2000ದಿಂದ 14.05.2006ರವರೆಗೆ ಶೇಕಡಾ 8ರಂತೆ ಬಡ್ಡಿಯೊಂದಿಗೆ ಪಾವಿತಿಸಬೇಕಾಗಿರುತ್ತದೆ. ಆದರೆ ಸದರಿಯವರು ಈಗಾಗಲೇ ರೂ.1,476/- (ರೂ. ಒಂದು ಸಾವಿರದ ನಾಲ್ಕು ನೂರ ಎಪ್ಪತ್ತಾರುಗಳು ಮಾತ್ರ) ಗಳನ್ನು ಸರ್ಕಾರಕ್ಕೆ ಜಮೆ ಮಾಡಿರುವುದರಿಂದ ಸದರಿ ಮೊತ್ತಕ್ಕೆ ಶೇಕಡಾ 8ರಂತೆ ಬಡ್ಡಿ ಹಣ ವಸೂಲು ಮಾಡಬೇಕಾಗಿರುವುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಕಂಇ 30 ಎಡಿಇ 2003, ಬೆಂಗಳೂರು, ದಿನಾಂಕ:24ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕ.ನಾ.ಸೇ.ನಿ. ನಿಯಮ 214ರ ಅಡಿ ರೂ.1,476/- ಮೊತ್ತಕ್ಕೆ ದಿನಾಂಕ:27.06.2000 ದಿಂದ 14.05.2006ರವರೆಗೆ ಶೇಕಡಾ 8ರಂತೆ ಬಡ್ಡಿ ಹಣವನ್ನು ಶ್ರೀ ಎಂ.ಎ. ಲಕ್ಷ್ಮೀಪತಿ, ನಿವೃತ್ತ ತಹಶೀಲ್ದಾರ್ ಇವರ ಗಳಿಕೆ ರಜೆ ನಗದೀಕರಣ ಮೊತ್ತದಲ್ಲಿ ಕಟಾಯಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. 1133

## ಇಂಧನ ಸಚಿವಾಲಯ

**ವಿಷಯ:** ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಪರವಾಗಿ ರೂ.500 ಕೋಟಿಗಳನ್ನು 5 ವರ್ಷದ ಅವಧಿ ಸಾಲವಾಗಿ ಹೊಂದಲು ಸರ್ಕಾರದ ಖಾತರಿಯನ್ನು ನೀಡುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಅರೆ ಸರ್ಕಾರಿ ಪತ್ರ ಸಂಖ್ಯೆ:ಎ1 ಎಫ್3 ಬಿ2 ದಿನಾಂಕ:21.01.2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಪತ್ರದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಕಳುಹಿಸಿರುವ ಪ್ರಸ್ತಾವನಕ್ಕೆ ನಿಗಮವು ತನ್ನ ದಿನನಿತ್ಯದ ಕಾರ್ಯ ನಿರ್ವಹಣೆ ನಿಮಿತ್ತವಾಗಿ ಹಲವಾರು ವಾಣಿಜ್ಯ ಬ್ಯಾಂಕ್‌ಗಳಿಂದ 3/6 ತಿಂಗಳುಗಳ ಕಾಲಾವಧಿಗೆ ಯಾವುದೇ ಆಧಾರ ಇಲ್ಲದೇ ಪಡೆದಿರುವ ಅಲ್ಪಾವಧಿ ಸಾಲದ (Short Term Loan) ಮೊತ್ತವು ರೂ.1,801 ಕೋಟಿಗಳಾಗಿದ್ದು ಇದರಿಂದಾಗಿ ನಿಗಮಕ್ಕೆ ಸಾಲವನ್ನು ನಿರ್ವಹಿಸುವಲ್ಲಿ ಅನೇಕ ತೊಂದರೆಗಳು ಉಂಟಾಗುತ್ತಿವೆ. ಈ ವಾಣಿಜ್ಯ ಬ್ಯಾಂಕ್/ ಆರ್ಥಿಕ ಸಂಸ್ಥೆಗಳ ಅಲ್ಪಾವಧಿ ಸಾಲವನ್ನು ಮಧ್ಯಮಾವಧಿ ಸಾಲವನ್ನಾಗಿ ಪರಿವರ್ತಿಸಲು ಉದ್ದೇಶಿಸಿದ್ದು ಇದಕ್ಕಾಗಿ ಸರ್ಕಾರದಿಂದ ನಿಗಮದ 500 ಕೋಟಿಗಳ ಸಾಲವನ್ನು 5 ವರ್ಷಗಳ ಮಧ್ಯಮಾವಧಿ ಸಾಲವನ್ನಾಗಿ ಪರಿವರ್ತಿಸಲು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಪರವಾಗಿ ಸರ್ಕಾರದ ಖಾತರಿ (Guarantee) ಯನ್ನು ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 7 ಪಿಪಿಸಿ 2006, ಬೆಂಗಳೂರು, ದಿನಾಂಕ:29ನೇ ಜುಲೈ, 2006**

ಮೇಲೆ ಹೇಳಿರುವ ಸಂದರ್ಭಗಳ ಕಾರಣದಿಂದ ಸರ್ಕಾರವು ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ವಾಣಿಜ್ಯ ಬ್ಯಾಂಕುಗಳು/ ಆರ್ಥಿಕ ಸಂಸ್ಥೆಗಳಿಂದ ಪಡೆದಿರುವ ಅಲ್ಪಾವಧಿ ಸಾಲವನ್ನು ಮಧ್ಯಮಾವಧಿ ಸಾಲವನ್ನಾಗಿ (5 ವರ್ಷ) ಪರಿವರ್ತಿಸಲು ರೂ.500 ಕೋಟಿಗಳಿಗೆ (ಐದು ನೂರು

ಕೋಟಿ) ಸರ್ಕಾರದ ಖಾತರಿಯನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಪರವಾಗಿ ನೀಡಲು ಅನುಮೋದನೆಯನ್ನು ನೀಡಿದೆ. ಇದಕ್ಕಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಶೇಕಡಾ 1 (ಒಂದು) ರಂತೆ ಸರ್ಕಾರಕ್ಕೆ ಗ್ಯಾರಂಟಿ ಕಮೀಷನ್ ನೀಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 220 ವೆಚ್ಚ-1 2006 ದಿನಾಂಕ:16.06.2006ರಲ್ಲಿ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 1151

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆ, ಚಿಕ್ಕೋಡಿ ತಾಲ್ಲೂಕು, ಯಡೂರು ಶ್ರೀ ವೀರಭದ್ರಸ್ವಾಮಿ ದೇವಸ್ಥಾನ ಮತ್ತು ಕಾಡ ಸಿದ್ದೇಶ್ವರ ಮಠವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003, ದಿನಾಂಕ:30.04.2003.

(2) ಧಾರ್ಮಿಕ ದತ್ತಿ ಆಯುಕ್ತರವರ ಪತ್ರ ಸಂಖ್ಯೆ: ಏಕರೂಪಶಾಸನ/ ಸಿಆರ್/ 85/ 2005-06, ದಿನಾಂಕ:15.02.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ. ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಬೆಳಗಾವಿ ಜಿಲ್ಲೆ, ಚಿಕ್ಕೋಡಿ ತಾಲ್ಲೂಕು, ಯಡೂರು ಶ್ರೀ ವೀರಭದ್ರಸ್ವಾಮಿ ದೇವಸ್ಥಾನವು ಶ್ರೀ ಕಾಡಸಿದ್ದೇಶ್ವರ ಮಠಕ್ಕೆ ಸೇರಿದ ದೇವಸ್ಥಾನವಾಗಿರುವುದರಿಂದ ಮತ್ತು ಸದರಿ ಸಂಸ್ಥೆಯು ಮುಂಬೈ ಸಾರ್ವಜನಿಕ ಜಿಮ್ಮೆಗಳ ಕಾಯಿದೆ 1950ರನ್ವಯ ನೋಂದಾಯಿಸಿದ್ದು, ಸದರಿ ದಾಖಲೆಯಲ್ಲಿ ವ್ಯವಸ್ಥಾಪಕರ ಹೆಸರು ಶ್ರೀ ಸಿದ್ದಲಿಂಗೇಶ್ವರ ಗುರು ಸಿದ್ದೇಶ್ವರ ಪಟ್ಟಚರ ಮೂರ್ತಿ ಶ್ರೀ ಕಾಡಸಿದ್ದೇಶ್ವರ ಮಠ ಮತ್ತು ಉತ್ತರಾಧಿಕಾರಿ ನೀತಿಯ ಅಂಕಣದಲ್ಲಿ ಗುರುವಿನಿಂದ ಶಿಷ್ಯರಿಗೆ ಎಂದು ಇರುವುದರಿಂದ ಜಿಲ್ಲಾಧಿಕಾರಿಗಳು ಮತ್ತು ಧಾರ್ಮಿಕ ದತ್ತಿ ಆಯುಕ್ತರವರು ದೇವಸ್ಥಾನದ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೈಬಿಡಲು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಶಿಫಾರಸ್ಸನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 17 ಮುಆಬಿ 2006, ಬೆಂಗಳೂರು, ದಿನಾಂಕ:10ನೇ ಆಗಸ್ಟ್, 2006**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1 ಉಪ ನಿಯಮ 4(ii)ರ ಪ್ರಕಾರ "ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ" ಎಂದಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003 ದಿನಾಂಕ:30.04.2003ರಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಬೆಳಗಾವಿ ಜಿಲ್ಲೆ, ಚಿಕ್ಕೋಡಿ ತಾಲ್ಲೂಕು, ಯಡೂರು ಗ್ರಾಮದ ಶ್ರೀ ವೀರಭದ್ರಸ್ವಾಮಿ ದೇವಸ್ಥಾನ ಕ್ರಮಸಂಖ್ಯೆ: 2 ಪುಟ ಸಂಖ್ಯೆ:168ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪಿ.ಆರ್. 1199

ಪೀಠಾಧಿಕಾರಿ,

ಕಂದಾಯ ಇಲಾಖೆ (ಮುಜರಾಯಿ).

## ಇಂಧನ ಸಚಿವಾಲಯ

**ವಿಷಯ:** ಉಡುಪಿ ಜಿಲ್ಲೆಯಲ್ಲಿ ಸ್ಥಾಪಿಸಲು ಉದ್ದೇಶಿಸಿರುವ 1015 ಮೆಗಾವ್ಯಾಟ್ ಸಾಮರ್ಥ್ಯದ ನಾಗಾರ್ಜುನ ವಿದ್ಯುತ್ ಯೋಜನೆಯ ಪ್ರಗತಿಯ ಮೇಲ್ವಿಚಾರಣೆ ನಡೆಸಲು ಸಮಿತಿಯನ್ನು ರಚಿಸುವ ಕುರಿತು.

**ಓದಲಾಗಿದೆ:** ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಎಸ್‌ಸಿಎಂ/ 2363/ 2006, ದಿನಾಂಕ:27.07.2006.

**ಪ್ರಸ್ತಾವನೆ:**

1015 ಮೆಗಾವ್ಯಾಟ್ ಸಾಮರ್ಥ್ಯದ ನಾಗಾರ್ಜುನ ವಿದ್ಯುತ್ ಯೋಜನೆಗೆ ಕರ್ನಾಟಕ ಸರ್ಕಾರವು 1994-95ರಲ್ಲಿಯೇ ಅನುಮೋದನೆ ನೀಡಿದೆ. ಯೋಜನೆಯನ್ನು ಅನುಷ್ಠಾನಗೊಳಿಸಲು ಬೇಕಾಗಿರುವ ಎಲ್ಲಾ ರೀತಿಯ ಒಪ್ಪಿಗೆ ಮತ್ತು ಅನುಮೋದನೆಗಳನ್ನು ನಾಗಾರ್ಜುನ ವಿದ್ಯುತ್ ಕಂಪನಿಯು ಪಡೆದುಕೊಂಡಿದೆ. ಮಾನ್ಯ ಮುಖ್ಯಮಂತ್ರಿಯವರು ಯೋಜನೆಯ ಪರ ವಿರೋಧವಾಗಿರುವ ಪ್ರತಿನಿಧಿಗಳೊಂದಿಗೆ ಸಭೆ ನಡೆಸಿ ಅವರೊಂದಿಗೆ ಚರ್ಚಿಸಿ, ಸರ್ಕಾರವು ಅಧಿಕಾರಿಗಳಿಗೆ ಸದರಿ ಯೋಜನೆಗೆ ಎಲ್ಲಾ ರೀತಿಯ ಬೆಂಬಲವನ್ನು ವಿಸ್ತರಿಸಲು ಸೂಚಿಸಿದ್ದಾರೆ.

ಯೋಜನೆಯ ಅನುಷ್ಠಾನದಲ್ಲಿ ಯಾವುದೇ ಅಡೆತಡೆಗಳು ಬಾರದಿರುವಂತೆ ನೋಡಿಕೊಳ್ಳಲು, ಬಾಕಿ ಇರುವ ಎಲ್ಲಾ ವಿವಾದಗಳನ್ನು ಬಗೆಹರಿಸಲು ಮತ್ತು ತಿಂಗಳಿಗೊಮ್ಮೆ ಸಭೆ ನಡೆಸಿ ಯೋಜನೆಯ ಪ್ರಗತಿಯ ಮೇಲ್ವಿಚಾರಣೆ ನಡೆಸಲು ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಕೆಳಕಂಡವರನ್ನೊಳಗೊಂಡ ಸಮಿತಿಯೊಂದನ್ನು ರಚಿಸಲು, ಮುಖ್ಯಮಂತ್ರಿಯವರ ನಿರ್ದೇಶನದಂತೆ, ಮುಖ್ಯಮಂತ್ರಿಯವರ ಕಾರ್ಯದರ್ಶಿಯವರು ಮುಖ್ಯ ಕಾರ್ಯದರ್ಶಿಯವರನ್ನು ಓದಲಾದ ಟಿಪ್ಪಣಿಯಲ್ಲಿ ಕೋರಿದ್ದಾರೆ.

| | | |
|---|---|---|
| 1. | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | - ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ | - ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | - ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | - ಸದಸ್ಯರು |
| 5. | ಕಾರ್ಯಕಾರಿ ಸದಸ್ಯರು, ಕೆ.ಐ.ಎ.ಡಿ.ಬಿ. | - ಸದಸ್ಯ ಕಾರ್ಯದರ್ಶಿ |

6. ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ - ಸದಸ್ಯರು
7. ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ, ಉಡುಪಿ - ಸದಸ್ಯರು

ಆದುದರಿಂದ ಈ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 15 ಪಿಪಿಸಿ 2005, ಬೆಂಗಳೂರು, ದಿನಾಂಕ:28ನೇ ಜುಲೈ, 2006**

ರಾಜ್ಯ ಸರ್ಕಾರವು ನಾಗಾರ್ಜುನ ಯೋಜನೆಯ ಅನುಷ್ಠಾನದಲ್ಲಿ ಯಾವುದೇ ಅಡೆತಡೆಗಳು ಬಾರದಿರುವಂತೆ ನೋಡಿಕೊಳ್ಳಲು, ಬಾಕಿ ಇರುವ ಎಲ್ಲಾ ವಿವಾದಗಳನ್ನು ಬಗೆಹರಿಸಲು ಮತ್ತು ತಿಂಗಳಿಗೊಮ್ಮೆ ಸಭೆ ನಡೆಸಿ ಯೋಜನೆಯ ಪ್ರಗತಿಯ ಮೇಲ್ವಿಚಾರಣೆ ನಡೆಸಲು ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಕೆಳಕಂಡವರನ್ನೊಳಗೊಂಡ ಸಮಿತಿಯೊಂದನ್ನು ರಚಿಸಲಾಗಿದೆ.

1. ಸರ್ಕಾರದ ಮುಖ್ಯ ಕಾರ್ಯದರ್ಶಿಗಳು - ಅಧ್ಯಕ್ಷರು
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ - ಸದಸ್ಯರು
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ - ಸದಸ್ಯರು
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ - ಸದಸ್ಯರು
5. ಕಾರ್ಯಕಾರಿ ಸದಸ್ಯರು, ಕೆ.ಐ.ಎ.ಡಿ.ಬಿ. - ಸದಸ್ಯ ಕಾರ್ಯದರ್ಶಿ
6. ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ - ಸದಸ್ಯರು
7. ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ, ಉಡುಪಿ - ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 1152

**ವಿಷಯ:** ಡಾ: ಬಿ. ಶಿವಲಿಂಗಯ್ಯ, ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್ ಇವರ ಮುಂದಾಳತ್ವದಲ್ಲಿ "ರಿನೆವೆಬಲ್ ಎನರ್ಜಿ ಟ್ರೆಡ್ ಮಿಷನ್" ಅನ್ನು ಅಮೇರಿಕ ಸಂಯುಕ್ತ ರಾಷ್ಟ್ರಕ್ಕೆ ಪ್ರವಾಸ ಮಾಡಲು ಅನುಮತಿ ನೀಡುವ ಕುರಿತು.

**ಓದಲಾಗಿದೆ:** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/01/ಎಂಡಿ/ ಯುಎಸ್.ಟೂರ್/ 2006/ 1567 ದಿನಾಂಕ:13.07.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಇವರು Embassy of the United States of America, U.S. Commercial Service, New Delhi ಇವರ ಪತ್ರ ದಿನಾಂಕ:03.07.2006ರ ಆಹ್ವಾನದ ಮೇರೆಗೆ ದಿನಾಂಕ:05.08.2006 ರಿಂದ 16.08.2006 ರವರೆಗೆ "ರಿನೆವೆಬಲ್ ಎನರ್ಜಿ ಟ್ರೆಡ್ ಮಿಷನ್" ನ ಮುಂದಾಳತ್ವವಹಿಸಿ ಅಮೇರಿಕದ ಸಂಯುಕ್ತ ರಾಷ್ಟ್ರಕ್ಕೆ ನವೀಕರಿಸಬಹುದಾದ ಇಂಧನ ಅಭಿವೃದ್ಧಿ, ಸೌರ ವಿದ್ಯುತ್, ಜೈವಿಕ ಇಂಧನ, ಬದಲಿ ಇಂಧನ ಮೂಲಗಳ ಬಗ್ಗೆ ಮತ್ತು ಕ್ಲೀನ್ ಡೆವಲಪ್‌ಮೆಂಟ್ ಮೆಕ್ಯಾನಿಜಮ್ ಇತ್ಯಾದಿಗಳ ಬಗ್ಗೆ ವಿಚಾರ ವಿನಿಮಯ ಮಾಡುವ ಸಲುವಾಗಿ ಪ್ರವಾಸ ಮಾಡಲು ಅನುಮತಿ ನೀಡುವಂತೆ ಕೋರಿದ್ದಾರೆ. ಸದರಿ ಪ್ರವಾಸಕ್ಕೆ ತಗಲುವ ಎಲ್ಲಾ ಖರ್ಚು ವೆಚ್ಚಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇದರ ನಿಧಿಯಿಂದ ಭರಿಸುವುದಾಗಿ ತಿಳಿಸಿರುತ್ತಾರೆ. ಸರ್ಕಾರಕ್ಕೆ ಇದರಿಂದ ಯಾವುದೇ ಆರ್ಥಿಕ ಹೊರೆ ಬೀಳುವುದಿಲ್ಲವೆಂದು ತಿಳಿಸಿರುತ್ತಾರೆ.

ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 277 ಎನ್‌ಸಿಇ 2006, ಬೆಂಗಳೂರು, ದಿನಾಂಕ:31ನೇ ಜುಲೈ, 2006**

ಸರ್ಕಾರವು ಡಾ: ಬಿ. ಶಿವಲಿಂಗಯ್ಯ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರಿಗೆ ಅಮೇರಿಕ ಸಂಯುಕ್ತ ರಾಷ್ಟ್ರದಲ್ಲಿ ದಿನಾಂಕ:05.08.2006 ರಿಂದ 16.08.2006 (ಎರಡು ದಿನಗಳು ಸೇರಿ) ರವರೆಗೆ ನಡೆಯಲಿರುವ "ರಿನೆವೆಬಲ್ ಎನರ್ಜಿ ಟ್ರೆಡ್ ಮಿಷನ್" ನಲ್ಲಿ ಭಾಗವಹಿಸಲು ಅನುಮತಿಯನ್ನು ಈ ಕೆಳಗಿನ ಷರತ್ತಿನೊಂದಿಗೆ ನೀಡಿದೆ:

1. ಸದರಿ ಪ್ರಯಾಣದ ಎಲ್ಲಾ ಖರ್ಚು ವೆಚ್ಚಗಳನ್ನು ಕ್ರೆಡಲ್ ಸಂಸ್ಥೆಯೇ ಭರಿಸತಕ್ಕದ್ದು.
2. ಸದರಿ ಅಧಿಕಾರಿಯವರು ವಿದೇಶ ಪ್ರವಾಸದಿಂದ ಹಿಂತಿರುಗಿ ಬಂದ ಕೂಡಲೇ ಪ್ರವಾಸದ ವರದಿ, ತಗುಲಿದ ವೆಚ್ಚದ ವಿವರಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 1153

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜ್ ಆಫ್ ಮೆಡಿಕಲ್ ಸೈನ್ಸ್, ಧಾರವಾಡ ಇವರಿಗೆ ಶವ ಪರೀಕ್ಷೆ ನಡೆಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** (1) ಪ್ರಾಂಶುಪಾಲರು, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜ್ ಆಫ್ ಮೆಡಿಕಲ್ ಸೈನ್ಸ್, ಧಾರವಾಡ ಇವರ ಪತ್ರ ದಿನಾಂಕ: 03.03.2006.

(2) ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಂಇಎಸ್(2)25/ 2005-06, ದಿನಾಂಕ:06.01.2006.

**ಪ್ರಸ್ತಾವನೆ:**

(1) ಮೇಲೆ ಓದಲಾದ (1)ರ ಪತ್ರದಲ್ಲಿ ಧಾರವಾಡದ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜ್ ಆಫ್ ಮೆಡಿಕಲ್ ಸೈನ್ಸ್‌ನ ಪ್ರಾಂಶುಪಾಲರು ಅವರ ಕಾಲೇಜಿನ ಆಸ್ಪತ್ರೆಯಲ್ಲಿ ಮರಣೋತ್ತರ ಶವ ಪರೀಕ್ಷೆ ನಡೆಸಲು ಅನುಮತಿ ನೀಡುವಂತೆ ಕೋರಿರುತ್ತಾರೆ. ಈ ಬಗ್ಗೆ ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯದ ವಿದಿವೈದ್ಯ ಶಾಸ್ತ್ರ ವಿಭಾಗದ ಮುಖ್ಯಸ್ಥರಿಂದ ಧಾರವಾಡದ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜ್ ಆಫ್ ಮೆಡಿಕಲ್ ಸೈನ್ಸ್‌ನ ತಪಾಸಣೆ ನಡೆಸಿ, ಶವ ಪರೀಕ್ಷೆ ಅಧ್ಯಾಯನ ಮಾಡಲು ವಿದ್ಯಾರ್ಥಿಗಳಿಗೆ ಪ್ರಾಯೋಗಿಕ ತರಭೇತಿ ನೀಡಲು ವಿದ್ಯಾಲಯವು ಸಾಕಷ್ಟು ಪ್ರಮಾಣದಲ್ಲಿ ಮೂಲಭೂತ ಸೌಕರ್ಯಗಳು ಹೊಂದಿರುವುದಾಗಿ ವರದಿಯಲ್ಲಿ ತಿಳಿಸಿರುತ್ತಾರೆ.

(2) ಮೇಲ್ಕಂಡ ಶಿಫಾರಸ್ಸನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಮೇಲ್ಕಂಡ ವೈದ್ಯಕೀಯ ಕಾಲೇಜಿನ ಆಸ್ಪತ್ರೆಗೆ ಸದರಿ ಆಸ್ಪತ್ರೆಯಲ್ಲಿ ಮರಣದಿಂದ ಉಂಟಾಗುವ ಶವಗಳ ಮರಣೋತ್ತರ ಪರೀಕ್ಷೆಯನ್ನು ನಡೆಸಲು ಅನುಮತಿ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 6 ಎಂಪಿಎಸ್ 2006, ಬೆಂಗಳೂರು, ದಿನಾಂಕ:26ನೇ ಜುಲೈ, 2006**

(3) ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಧಾರವಾಡದ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜ್ ಆಫ್ ಮೆಡಿಕಲ್ ಸೈನ್ಸ್‌ಸ್ ವಿದ್ಯಾರ್ಥಿಗಳ ಪ್ರಾಯೋಗಿಕ ತರಬೇತಿಗಾಗಿ ಸದರಿ ಆಸ್ಪತ್ರೆಯಲ್ಲಿ ಮರಣದಿಂದ ಉಂಟಾಗುವ ಶವಗಳ ಮರಣೋತ್ತರ ಪರೀಕ್ಷೆಯನ್ನು ನಡೆಸಲು ಈ ಕೆಳಕಂಡ ಷರತ್ತುಗಳೊಂದಿಗೆ ಅನುಮತಿ ನೀಡಿದೆ.

1. ಮರಣೋತ್ತರ ಪರೀಕ್ಷೆಗಾಗಿ ಯಾವುದೇ ಶುಲ್ಕವನ್ನು ಮೃತರ ಕುಟುಂಬದಿಂದ ಅಥವಾ ಬಂಧುಬಾಂಧವರಿಂದ ವಸೂಲಿ ಮಾಡಬಾರದು.
2. ಮರಣೋತ್ತರ ಶವ ಪರೀಕ್ಷೆಯ ನಂತರ ರಾಸಾಯನಿಕ ಪರೀಕ್ಷೆಗಳಿಗಾಗಿ ಆಯ್ದ ಭಾಗಗಳನ್ನು ಆರಕ್ಷಕರು ಸೂಚಿಸಿದ ಸ್ಥಳದಲ್ಲಿಯೇ ನಿರ್ವಹಿಸುವುದು.
3. ಕಾಲಕಾಲಕ್ಕೆ ಸರ್ಕಾರವು ನಿಗದಿಪಡಿಸಿದ ಆಸ್ಪತ್ರೆಯ ಕರ್ತವ್ಯದ ಅವಧಿಯಲ್ಲಿ ಆರಕ್ಷಕರಿಂದ ಪಂಚನಾಮೆ ನಡೆಸಿ ಮರಣೋತ್ತರ ಪರೀಕ್ಷೆ ನಡೆಸುವುದು.
4. ಮರಣ ಕಾರಣ, ಇತ್ಯಾದಿ ಮರಣೋತ್ತರ ಪರೀಕ್ಷಾ ವರದಿಗಳನ್ನು ನಿಗದಿತ ಸಮಯದೊಳಗೆ ತಯಾರಿಸಿ, ಸಂಬಂಧಪಟ್ಟ ಆರಕ್ಷಕ ಠಾಣೆಗೆ ಸಲ್ಲಿಸುವುದು.
5. ಮೆಡಿಕೋ ಲೀಗಲ್ ತಜ್ಞರ ಪ್ರಮಾಣ ಪತ್ರವನ್ನು (Expert Opinion) ಸದರಿ ಮಹಾವಿದ್ಯಾಲಯದ ವಿಧಿವೈದ್ಯಶಾಸ್ತ್ರ ಪ್ರಾಧ್ಯಾಪಕರ ಹುದ್ದೆಯನ್ನು ಹೊಂದಿದವರು ಮಾತ್ರ ನೀಡುವುದು.
6. ಮರಣೋತ್ತರ ಶವ ಪರೀಕ್ಷೆಗೆ ಆಗುವ ಆರ್ಥಿಕ ಹೊರೆಯನ್ನು ಸರ್ಕಾರದಿಂದ ಭರಿಸಲಾಗುವುದಿಲ್ಲ.
7. ಸಾಕ್ಷ್ಯಾಧಾರ ಒದಗಿಸುವ ಸಲುವಾಗಿ ನ್ಯಾಯಾಲಯಗಳಿಗೆ ಹಾಜರಾಗುವ ಸಂಬಂಧ ಯಾವುದೇ ಭತ್ಯೆಯನ್ನು ಸರ್ಕಾರ ಭರಿಸುವುದಿಲ್ಲ.
8. ಶವ ಪರೀಕ್ಷೆ ನಡೆಸಿದ ತಜ್ಞರು ಉದ್ಯೋಗದಲ್ಲಿ ಮುಂದುವರೆಯದಿದ್ದರೂ ಸಹ ನ್ಯಾಯಾಲಯಕ್ಕೆ ಸಾಕ್ಷ್ಯಾಧಾರ ನೀಡಲು ಹಾಜರು ಪಡಿಸುವ ಜವಾಬ್ದಾರಿ ಸದರಿ ವೈದ್ಯಕೀಯ ಮಹಾವಿದ್ಯಾಲಯದ್ದಾಗಿರುತ್ತದೆ.
9. ಮೆಡಿಕೊ ಲೀಗಲ್ ಪ್ರಕರಣಗಳಲ್ಲಿ ಕಾಯ್ದಿರಿಸಿದ ವಸ್ತುಗಳನ್ನು ವಿಧಿವೈದ್ಯಶಾಸ್ತ್ರ ವಿಭಾಗದ ಪ್ರಾಧ್ಯಾಪಕರು ವಿಶ್ಲೇಷಿಸಿ, ಅಭಿಪ್ರಾಯ ನೀಡುವ ಸಲುವಾಗಿ ಅಗತ್ಯವಾದ ಪ್ರಯೋಗಾಲಯವನ್ನು ಸ್ಥಾಪಿಸಿ, ಅದಕ್ಕೆ ರಾಷ್ಟ್ರೀಯ ಅಕ್ರಿಡೇಷನ್ ಮಾನ್ಯತೆಯನ್ನು ಹೊಂದತಕ್ಕದ್ದು.

(4) ಮೇಲ್ಕಂಡ ಷರತ್ತು ಮತ್ತು ನಿಬಂಧನೆಗಳಲ್ಲದೆ ಸರ್ಕಾರ/ ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ/ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕಾಲಕಾಲಕ್ಕೆ ಹೊರಡಿಸುವ ಸ್ಥಾಯಿ ಆದೇಶಗಳನ್ನು/ ಸೂಚನೆಗಳನ್ನು ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ).

ಪಿ.ಆರ್. 1154

**ವಿಷಯ:** ಡಿ.ಎಂ. (ನ್ಯೂರಾಲಜಿ) ಸ್ನಾತಕೋತ್ತರ ಉನ್ನತ ವ್ಯಾಸಂಗಕ್ಕಾಗಿ ಮೈಸೂರು ವೈದ್ಯಕೀಯ ಕಾಲೇಜಿನ ನ್ಯೂರಾಲಜಿ ವಿಭಾಗದ ಉಪನ್ಯಾಸಕ ಡಾ: ಸುರೇಶ್ ಕೆ. ರವರನ್ನು ನಿಯೋಜಿಸುವ ಬಗ್ಗೆ.

**ಓದಲಾಗಿದೆ:** (1) ದಿನಾಂಕ:22.04.2006 ಸಂಖ್ಯೆ: ವೈಶಿನಿ/ ಎಂಇಹೆಚ್/ 4/ 2006-07ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
(2) ದಿನಾಂಕ:02.05.2006 ಸಂಖ್ಯೆ: ಆಕುಕ 12 ಎಂಪಿಎಲ್ 2006ರ ಸರ್ಕಾರಿ ಪತ್ರ.
(3) ದಿನಾಂಕ:14.07.2006 ಸಂಖ್ಯೆ: ಎಂಇಹೆಚ್/ 22/ 2006-07ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಬೆಂಗಳೂರಿನ ನಿಮ್ಹಾನ್ಸ್ ಆಸ್ಪತ್ರೆಯಲ್ಲಿ ಡಿ.ಎಂ. (ನ್ಯೂರಾಲಜಿ) ಪ್ರವೇಶ ಪರೀಕ್ಷೆಗೆ ಹಾಜರಾಗಲು ಮೈಸೂರು ವೈದ್ಯಕೀಯ ಕಾಲೇಜಿನ ನ್ಯೂರಾಲಜಿ ವಿಭಾಗದ ಉಪನ್ಯಾಸಕ ಡಾ: ಸುರೇಶ್ ಕೆ. ರವರಿಗೆ ಪ್ರವೇಶ ಪರೀಕ್ಷೆಗೆ ಹಾಜರಾಗಲು ಅವರ ಅರ್ಜಿಯನ್ನು ಸರ್ಕಾರಕ್ಕೆ ರವಾನಿಸಲಾಗಿತ್ತು. ಅವರ ಅರ್ಜಿಯನ್ನು ಪರಿಶೀಲಿಸಿ ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಪತ್ರದೊಂದಿಗೆ ನಿಮ್ಹಾನ್ಸ್‌ನ ನಿರ್ದೇಶಕರಿಗೆ ನಿರಾಕ್ಷೇಪಣೆಯೊಂದಿಗೆ ಕಳುಹಿಸಿಕೊಡಲಾಗಿತ್ತು. ಇಬ್ಬರು ಅಭ್ಯರ್ಥಿಗಳ ಪೈಕಿ ಡಿ.ಎಂ. ನ್ಯೂರಾಲಜಿ ಪ್ರವೇಶ ಪರೀಕ್ಷೆಯಲ್ಲಿ ಇವರು ಈಗ ಆಯ್ಕೆ ಹೊಂದಿರುತ್ತಾರೆ. ಮೇಲೆ (3)ರಲ್ಲಿ ಓದಲಾಧ ಪ್ರಸ್ತಾವನೆಯಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೈಸೂರು ವೈದ್ಯಕೀಯ ಕಾಲೇಜಿನ ನರರೋಗ ಶಾಸ್ತ್ರ ವಿಭಾಗದ ಉಪನ್ಯಾಸಕ ಡಾ: ಸುರೇಶ್ ಕೆ. ಇವರನ್ನು ನಿಮ್ಹಾನ್ಸ್‌ಗೆ ಡಿ.ಎಂ. (ನರರೋಗಶಾಸ್ತ್ರ) ಉನ್ನತ ವ್ಯಾಸಂಗ ಮಾಡಲು ಅವರನ್ನು ನಿಯೋಜಿಸಿ ಸರ್ಕಾರಿ ಆದೇಶ ಹೊರಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

2. ಅವರು ದಿನಾಂಕ:25.07.2000ರಂದು ನರರೋಗ ಶಾಸ್ತ್ರ ಉಪನ್ಯಾಸಕರಾಗಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆ ಹೊಂದಿರುತ್ತಾರೆ. ಅವರ ಖಾಯಂ ಪೂರ್ವ ಸೇವಾವಧಿಯನ್ನು ತೃಪ್ತಿಕರವಾಗಿದೆ ಎಂದು ಘೋಷಿಸಲಾಗಿದೆ. ದಿನಾಂಕ:03.08.2005ಕ್ಕೆ 5 ವರ್ಷಗಳ ಸತತ ಸೇವೆಯನ್ನು ಪೂರೈಸಿರುತ್ತಾರೆ. ಅವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ.

3. ನಿಮ್ಹಾನ್ಸ್ ಸಂಸ್ಥೆಯು ಭಾರತ ಸರ್ಕಾರದ ಸ್ವಾಯತ್ತ ಸಂಸ್ಥೆಯಾಗಿದ್ದು, ನರರೋಗ ಶಾಸ್ತ್ರದಲ್ಲಿ ಅದು ಒಂದು ಪ್ರತಿಷ್ಠಿತ ಸಂಸ್ಥೆಯಾಗಿದೆ. ಬೆಂಗಳೂರು ಹಾಗೂ ಮೈಸೂರು ವೈದ್ಯಕೀಯ ಕಾಲೇಜಿನಲ್ಲಿ ನರರೋಗ ಶಾಸ್ತ್ರ ಉಪನ್ಯಾಸಕರ ತೀವ್ರ ಕೊರತೆಯಿದ್ದು, ಈ ಸೂಪರ್ ಸ್ಪೆಷಾಲಿಟಿ ಕೋರ್ಸ್ ಯಾವ ವೈದ್ಯಕೀಯ ಕಾಲೇಜುಗಳಲ್ಲೂ ಇರುವುದಿಲ್ಲ. ಮೈಸೂರು ವೈದ್ಯಕೀಯ ಕಾಲೇಜಿನಲ್ಲಿ ಯಾರೂ ನರರೋಗ ಶಾಸ್ತ್ರ ಪದವಿಯನ್ನು ಹೊಂದಿರುವ ಉಪನ್ಯಾಸಕರು ಇರುವುದಿಲ್ಲ. ಆದ್ದರಿಂದ ಅವರ ಸೇವೆಯನ್ನು ಮೈಸೂರು ವೈದ್ಯಕೀಯ ಕಾಲೇಜಿನಲ್ಲಿ ಬಳಸಿಕೊಳ್ಳಬಹುದು. ಎಂ.ಸಿ.ಐ. ನಿಯಮಾವಳಿಗಳ ಪ್ರಕಾರ ನರರೋಗ ಶಾಸ್ತ್ರ ವಿಭಾಗದಲ್ಲಿ ಕೆಲಸ ಮಾಡಲು ನರರೋಗ ಶಾಸ್ತ್ರದಲ್ಲಿ ಡಿ.ಎಂ. (ನ್ಯೂರಾಲಜಿ) ಪದವಿ ಹೊಂದುವುದು ಕಡ್ಡಾಯವಾಗಿದೆ. ಇದು ಅವರ ಮೊದಲ ನಿಯೋಜನೆ ಆಗಿದ್ದು ಇದರಿಂದ ವೈದ್ಯಕೀಯ ವಿದ್ಯಾರ್ಥಿಗಳಿಗೆ ಹಾಗೂ ರೋಗಿಗಳಿಗೆ ಅನುಕೂಲವಾಗುವುದು.

4. ಈ ಹಿನ್ನೆಲೆಯಲ್ಲಿ ಅವರ ಪ್ರಕರಣವನ್ನು ಪರಿಶೀಲಿಸಿ ಅವರನ್ನು ಬೆಂಗಳೂರಿನ ನಿಮ್ಹಾನ್ಸ್‌ಗೆ ಉನ್ನತ ವ್ಯಾಸಂಗಕ್ಕಾಗಿ 3 ವರ್ಷಗಳ ಅವಧಿಗೆ ನಿಯೋಜಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 12 ಎಂಸಿಎಲ್ 2006, ಬೆಂಗಳೂರು, ದಿನಾಂಕ:28ನೇ ಜುಲೈ, 2006**

5. ಮೈಸೂರು ವೈದ್ಯಕೀಯ ಕಾಲೇಜಿನ ನರರೋಗ ಶಾಸ್ತ್ರ ವಿಭಾಗದ ಉಪನ್ಯಾಸಕ ಡಾ: ಸುರೇಶ್ ಕೆ. ರವರನ್ನು ಬೆಂಗಳೂರಿನ ನಿಮ್ಹಾನ್ಸ್‌ಗೆ ಡಿ.ಎಂ. (ನ್ಯೂರಾಲಜಿ) ಉನ್ನತ ವ್ಯಾಸಂಗಕ್ಕೆ 3 ವರ್ಷಗಳ ಅವಧಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 61(1)(ಎ) ರಡಿ ಸೇವಾ ನಿರತ ಸ್ನಾತಕೋತ್ತರ ಅಭ್ಯರ್ಥಿಯಾಗಿ ನಿಯೋಜಿಸಿ ಆದೇಶಿಸಿದೆ.

6. ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ಅಪೆಂಡಿಕ್ಸ್-II-A ರಲ್ಲಿನ ಷರತ್ತು ಹಾಗೂ ನಿಬಂಧನೆಗಳನ್ನು ಪೂರೈಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 1155

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ).

**ವಿಷಯ:** ಶ್ರೀ ತಿಪ್ಪೇಸ್ವಾಮಿ ಸಹಾಯಕ ನಿರ್ದೇಶಕರು, (ನರ್ಸಿಂಗ್ ಮತ್ತು ತರಬೇತಿ) ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಇವರು ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:** (1) ದಿನಾಂಕ:16.06.2006 ಸಂಖ್ಯೆ: ಆಕುಕ 163 ಎಂಎಂಸಿ 2005ರ ಸರ್ಕಾರಿ ಆದೇಶ.

(2) ದಿನಾಂಕ:28.06.2006 ಸಂಖ್ಯೆ: ಲೋಕ್/ ಐಎನ್‌ವಿ/ (ಜಿ)/ ಸಿಟಿ/ ಕ್ರೈಂ/ 47/ 2005ರ ಕರ್ನಾಟಕ ಲೋಕಾಯುಕ್ತ ಕಛೇರಿಯ ಹೆಚ್ಚುವರಿ ಆರಕ್ಷಕ ಮಹಾನಿರ್ದೇಶಕರವರ ಪತ್ರ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದ ನರ್ಸಿಂಗ್ ಮತ್ತು ತರಬೇತಿ (ಈಗ ಅಮಾನತ್ತಿನಲ್ಲಿರುವ) ಸಹಾಯಕ ನಿರ್ದೇಶಕರಾದ ಶ್ರೀ ತಿಪ್ಪೇಸ್ವಾಮಿರವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದಕ್ಕೆ ಸಂಬಂಧಿಸಿದಂತೆ ಅಭಿಯೋಜನಾ ಮಂಜೂರಾತಿ ಆದೇಶವನ್ನು ಹೊರಡಿಸಲಾಗಿತ್ತು. ಸದರಿ ಆದೇಶವು ಕೆಲವೊಂದು ನ್ಯೂನತೆಗಳಿಂದ ಕೂಡಿರುವುದರಿಂದ ನ್ಯೂನತೆಗಳನ್ನು ಸರಿಪಡಿಸುವಂತೆ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತ ಕಛೇರಿಯ ಹೆಚ್ಚುವರಿ ಆರಕ್ಷಕ ಮಹಾನಿರ್ದೇಶಕರು ಕೋರಿರುತ್ತಾರೆ. ಪ್ರಕರಣವನ್ನು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 163 ಎಂಎಂಸಿ 2005, ಬೆಂಗಳೂರು, ದಿನಾಂಕ:25ನೇ ಜುಲೈ, 2006**

ದಿನಾಂಕ: 16.06.2006 ಸಂಖ್ಯೆ: ಆಕುಕ 163 ಎಂಎಂಸಿ 2005ರ ಸರ್ಕಾರಿ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 1156

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ).

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಮಹಮ್ಮದ್ ಅಜೀಜುಲ್ಲಾ, ಹಿರಿಯ ಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಿಜಾಪುರ ಜಿಲ್ಲೆ, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದಲ್ಲಿ ಅಮಾನತ್ತು ಕುರಿತು.

**ಓದಲಾಗಿದೆ:** ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್:ಐಎನ್‌ವಿ(ಜಿ):ಎಲ್-6: ಸಿಆರ್-1: 2006-ಬಿಜೆಪಿ, ದಿನಾಂಕ:13.02.2006 ಮತ್ತು 10.05.2006.

**ಪ್ರಸ್ತಾವನೆ:**

ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಪತ್ರಗಳನ್ವಯ ಸಲ್ಲಿಸಿದ ವರದಿಯಲ್ಲಿ ಶ್ರೀ ಎ.ಎಸ್. ಮಾದರ, ಸಾ: ಬನಹಟ್ಟಿ, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇವರು ಲೋಕಾಯುಕ್ತ ಪೊಲೀಸರಿಗೆ ನೀಡಿದ ದೂರಿನಲ್ಲಿ ಟೆಂಡರ್ ಪಡೆದಿದ್ದ ಮರಳನ್ನು ಅನಧಿಕೃತವಾಗಿ ತೆಗೆದುಕೊಂಡು ಹೋಗುತ್ತಿದ್ದ ಕೆಲವು ಜನರ ಮೇಲೆ ಕ್ರಮಕೈಗೊಳ್ಳಲು ಅಂದರೆ, ಅಧಿಕೃತ ಸರ್ಕಾರಿ ಕೆಲಸವನ್ನು ಮಾಡಿಕೊಡಲು ಶ್ರೀ ಮಹಮ್ಮದ್ ಅಜೀಜುಲ್ಲಾ, ಹಿರಿಯ ಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಿಜಾಪುರ ಇವರು

ರೂ.2,000-00 ಅಕ್ರಮ ಸಂಭಾವನೆ (ಲಂಚ)ಗಾಗಿ ಒತ್ತಾಯಿಸಿದ್ದು, ಲಂಚದ ಹಣವನ್ನು ನೀಡಲು ಇಷ್ಟವಿಲ್ಲದ ಕಾರಣ, ಅರ್ಜಿದಾರರು ಬಿಜಾಪುರ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಲಿಖಿತ ದೂರು ಸಲ್ಲಿಸಿದ ಮೇರೆಗೆ, ಸದರಿ ಆರೋಪಿತ ಅಧಿಕಾರಿಯವರ ಮೇಲೆ ಭ್ರಷ್ಟಾಚಾರ ನಿರೋಧಕ ಕಾಯ್ದೆ, 1988ರಡಿ ಪ್ರಕರಣ ಸಂಖ್ಯೆ:1:2006 ಅನ್ನು ದಾಖಲಿಸಿ, ಟ್ರ್ಯಾಪ್ ಏರ್ಪಡಿಸಲಾಗಿದ್ದು, ಅದರಂತೆ ದಿನಾಂಕ:18.01.2006ರಂದು ಆಪಾದಿತ ಅಧಿಕಾರಿಯವರ ಕಛೇರಿಯಲ್ಲಿ ಬೀಸಿದ ಟ್ರ್ಯಾಪ್ ಬಲೆಯಲ್ಲಿ ಆರೋಪಿತ ಅಧಿಕಾರಿ ಶ್ರೀ ಮಹಮ್ಮದ್ ಅಜೀಜುಲ್ಲಾ, ಹಿರಿಯ ಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಿಜಾಪುರ ಇವರು ರೂ.1,000-00 ಲಂಚದ ಹಣವನ್ನು ಫಿರ್ಯಾದಿಯಿಂದ ಪಡೆಯುತ್ತಿರುವಾಗ ಲಂಚದ ಹಣದೊಡನೆ ಸಿಕ್ಕಿಹಾಕಿಕೊಂಡಿದ್ದು, ಆರೋಪಿತ ಸರ್ಕಾರಿ ನೌಕರರನ್ನು ಹಣದ ಸಮೇತ ಬಂಧಿಸಿ, ಪ್ರಕರಣದ ತನಿಖೆಯು ಮುಂದುವರೆದಿದ್ದು, ಸದರಿ ನೌಕರರ ಮೇಲಿನ ಭ್ರಷ್ಟಾಚಾರದ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿದ್ದು, ಪ್ರಕರಣದ ಸುಗಮ ತನಿಖೆಗೆ ಅನುಕೂಲವಾಗುವಂತೆ ಸದರಿ ನೌಕರರನ್ನು ಕೆ.ಸಿ.ಎಸ್. (ಸಿಸಿಎ) ನಿಯಮಾವಳಿ, 1957ರ ನಿಯಮ 10ರನ್ವಯ ಕೂಡಲೇ ಅಮಾನತ್ತಿನಲ್ಲಿಟ್ಟು ಇವರ ಲೀನ್ (ಸ್ಥಾನ) ಅನ್ನು ಬೇರೆಡೆಗೆ ವರ್ಗಾಯಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ.12:ಎಂಜಿಎಸ್. 2006, ಬೆಂಗಳೂರು, ದಿನಾಂಕ:22ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಸನ್ನಿವೇಶಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಎ) ಮತ್ತು (ಬಿ) ರನ್ವಯ ಪ್ರದತ್ತವಾದ ಅಧಿಕಾರದನ್ವಯ, ಶ್ರೀ ಮಹಮ್ಮದ್ ಅಜೀಜುಲ್ಲಾ, ಹಿರಿಯ ಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಿಜಾಪುರ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇಲಾಖಾ ವಿಚಾರಣೆ: ಕ್ರಿಮಿನಲ್ ಮೊಕದ್ದಮೆಯನ್ನು ಕಾಯ್ದಿರಿಸಿ, ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

(2) ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಮಹಮ್ಮದ್ ಅಜೀಜುಲ್ಲಾ ಇವರು ನಿಯಮಾನುಸಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

(3) ಅಮಾನತ್ತಿನ ಅವಧಿಯಲ್ಲಿ ಶ್ರೀ ಮಹಮ್ಮದ್ ಅಜೀಜುಲ್ಲಾ ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯವರ ಲಿಖಿತ ಅನುಮತಿ ಪಡೆಯದೆ, ಕೇಂದ್ರ ಕಾರ್ಯಸ್ಥಾನ ಬಿಡತಕ್ಕದ್ದಲ್ಲ.

(4) ಶ್ರೀ ಮಹಮ್ಮದ್ ಅಜೀಜುಲ್ಲಾ, ಹಿರಿಯ ಭೂವಿಜ್ಞಾನಿ (ಖನಿಜ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಿಜಾಪುರ ಇವರ ಲೀನ್‌ಅನ್ನು ಬೇರೆ ಕಡೆಗೆ ವರ್ಗಾಯಿಸುವ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎಸ್. ಪಟ್ಟಣಶೆಟ್ಟಿ**
ಸರ್ಕಾರದ ಅಪರ ಕಾರ್ಯದರ್ಶಿ(ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1157

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ, ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ ಮತ್ತು ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (ವಿಶೇಷ ಘಟಕ) ಈ ಮೂರು ಯೋಜನೆಗಳಡಿ ಗ್ರಾಮೀಣ ಪ್ರದೇಶಗಳಲ್ಲಿ ಕಾರ್ಯನಿರ್ವಹಿಸುವ ಕೂಲಿಕಾರರಿಗೆ ಕನಿಷ್ಟ ಕೂಲಿ ದರವನ್ನು ಹೆಚ್ಚಿಸುವ ಕುರಿತು.

**ಉಲ್ಲೇಖ:** 1. ಕಾರ್ಮಿಕ ಇಲಾಖೆಯ ಅಧಿಸೂಚನೆ ಸಂಖ್ಯೆ: ಕೆಎಇ.16.ಎಲ್ಎಂಡಬ್ಲ್ಯೂ.99 ದಿನಾಂಕ:14.01.2004.
2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ. ಪಅಕಾ. 143. ಎಸ್‌ಜಿಆರ್‌ವೈ, 2002 ಬೆಂಗಳೂರು, ದಿನಾಂಕ:17.08.2004.

**ಪ್ರಸ್ತಾವನೆ:**

ಉಲ್ಲೇಖ (1)ರನ್ವಯ, ಉಲ್ಲೇಖ (2)ರಂತೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ ಮತ್ತು ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (ವಿಶೇಷ ಘಟಕ) ಈ ಯೋಜನೆಗಳಡಿ ಕೆಲಸಮಾಡುವ, ಕೂಲಿ ಕಾರ್ಮಿಕರಿಗೆ, ಕೂಲಿಯ ದರವನ್ನು ರೂ.62.50/- ಗಳಿಗೆ, ನಿಗದಿಪಡಿಸಿ ಆದೇಶ ಹೊರಡಿಸಲಾಗಿದೆ. ಪ್ರಚಲಿತ ವರ್ಷದ ಗ್ರಾಹಕ ಬೆಲೆ ಸೂಚ್ಯಾಂಕಗಳ ಆಧಾರದ ಮೇಲೆ ಮಾರ್ಪಾಡಿನ ತುಟ್ಟಿಭತ್ಯೆಯನ್ನು ಪರಿಗಣಿಸಿ 2006-07ನೇ ಸಾಲಿಗೆ ಕಾರ್ಮಿಕ ಇಲಾಖೆಯವರು ಹೊರಡಿಸುವ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕದ ಆಧಾರದ ಮೇಲೆ ಪ್ರಸ್ತುತ ಇರುವ ದಿನಗೂಲಿಯ ಕನಿಷ್ಟ ದರವಾದ ರೂ.62.60/- ನ್ನು ರೂ.69.00 ಕ್ಕೆ ಹೆಚ್ಚಿಸಲು ದಿನಾಂಕ:22.07.2006ರಂದು ನಡೆದ ರಾಜ್ಯ ಉದ್ಯೋಗ ಖಾತರಿ ಪರಿಷತ್ತಿನ ಸಭೆಯಲ್ಲಿ ತೀರ್ಮಾನಿಸಿದೆ.

ಈ ಕಾರಣಗಳಿಂದ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ.21. ಉಖಾಯೋ. 2006, ಬೆಂಗಳೂರು, ದಿನಾಂಕ:25ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಗ್ರಾಮೀಣ ಪ್ರದೇಶಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಕುಶಲರಲ್ಲದ ಕಾರ್ಮಿಕರಿಗೆ ಪಾವತಿಸುತ್ತಿರುವ ಕೂಲಿಯ ಕನಿಷ್ಠ ದರವನ್ನು ರೂ.62.50/- ಗಳಿಂದ ರೂ.69/- ಗಳಿಗೆ ಹೆಚ್ಚಿಸಿ ನಿಗದಿಪಡಿಸಿದೆ. ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ ಮತ್ತು ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (ವಿಶೇಷ ಘಟಕ) ಯೋಜನೆಗಳಲ್ಲಿ ತೊಡಗಿರುವ ಕುಶಲರಲ್ಲದ ಕಾರ್ಮಿಕರಿಗೆ ಪ್ರತಿ ದಿನದ ಒಂದು ಭಾಗದ ಕೂಲಿಯನ್ನು 3 ಕೆ.ಜಿ. ಆಹಾರಧಾನ್ಯ ರೂಪದಲ್ಲಿ (ಪ್ರತಿ ಕೆ.ಜಿ.ಗೆ 6.25/- ರೂ.ಗಳಂತೆ) ಉಳಿದ ಭಾಗವಾದ ರೂ.50.25/-ನ್ನು ನಗದು ರೂಪದಲ್ಲಿ ಪಾವತಿಸಲು ಮತ್ತು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ತೊಡಗಿರುವ ಕುಶಲರಲ್ಲದ ಕಾರ್ಮಿಕರಿಗೆ ಕೂಲಿಯ ಪೂರ್ಣ ಮೊತ್ತವನ್ನು ಪಾವತಿಸಲು ಆದೇಶಿಸಿದೆ (ಅಂದರೆ, ಆಯಾ ಯೋಜನೆಗಳ ಮಾರ್ಗಸೂಚಿಗಳ ಪ್ರಕಾರ ಕೂಲಿಯನ್ನು ಪಾವತಿಸತಕ್ಕದ್ದು). ಈ ಆದೇಶವು ದಿನಾಂಕ:01.08.2006ರಿಂದ ಅನ್ವಯವಾಗುವಂತೆ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶಾಂತರಾಜ್**
ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದ ನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ.ಆರ್. 1158

## ಜಲಸಂಪನ್ಮೂಲ (ಸಣ್ಣ ನೀರಾವರಿ) ಸಚಿವಾಲಯ

**ವಿಷಯ:** ಶ್ರೀಮತಿ ಸಿ.ಜಿ. ಶಕುಂತಳ, ದ್ವಿತೀಯ ದರ್ಜೆ ಸಹಾಯಕಿ, ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಿಕ್ಕಮಗಳೂರು ಇವರನ್ನು ಜಲಸಂಪನ್ಮೂಲ (ಸಣ್ಣ ನೀರಾವರಿ) ಇಲಾಖೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯದ (ಉದ್ಯೋಗ ವಿಭಾಗ) ಬೆಂಗಳೂರು ಇವರ ಪತ್ರ ಸಂಖ್ಯೆ: ಉತನಿ/ ಉದ್ಯೋಗ/ ಆಡಳಿತ-1/ ವಿವ-12/ 06-07 ದಿನಾಂಕ:26.04.2006.

2. ಪ್ರಧಾನ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ರವರ ಪತ್ರಸಂಖ್ಯೆ: ಜಸಅ/ ಇಎಸ್‌ಯು/ ದ್ವಿದಸ/ ಅ.ಇ.ವ/ 06-07/ ದಿನಾಂಕ:24.05.2006: 02.06.2006 ಮತ್ತು 07.06.2006.

**ಪ್ರಸ್ತಾವನೆ:**

ಉಪ ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ, (ಉದ್ಯೋಗವಿಭಾಗ) ಬೆಂಗಳೂರು ಇವರು ಮೇಲೆ ಓದಲಾದ (1)ರ ಪತ್ರದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಸಿ.ಜಿ. ಶಕುಂತಳ, ಇವರನ್ನು ಹೆಚ್ಚುವರಿ ಸಿಬ್ಬಂದಿಯೆಂದು ಗುರುತಿಸಲಾಗಿರುತ್ತದೆಂದು ಇವರನ್ನು ಅದೇ ಇಲಾಖೆಯಲ್ಲಿ Re-deploy ಮಾಡಲು ಸಾಧ್ಯವಾಗುತ್ತಿಲ್ಲವಾದ್ದರಿಂದ ಸಣ್ಣ ನೀರಾವರಿ ಇಲಾಖೆಯಲ್ಲಿ ಮರು ನೇಮಕಗೊಳಿಸಲು ಪ್ರಧಾನ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇವರಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಧಾನ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ರವರು ಮೇಲೆ ಓದಲಾದ-2 ರಲ್ಲಿ ಚಿಕ್ಕಮಗಳೂರು ಸಣ್ಣ ನೀರಾವರಿ ಉಪ ವಿಭಾಗದಲ್ಲಿ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯು ಖಾಲಿ ಇದ್ದು, ಶ್ರೀಮತಿ ಸಿ.ಜಿ. ಶಕುಂತಳ, ದ್ವಿತೀಯ ದರ್ಜೆ ಸಹಾಯಕಿ ಇವರನ್ನು ಉದ್ಯೋಗ ಮತ್ತು ತರಬೇತಿ ಇಲಾಖೆಯಿಂದ ಜಲಸಂಪನ್ಮೂಲ ಇಲಾಖೆಗೆ ಅಂತರ ಇಲಾಖಾ ವರ್ಗಾವಣೆ ಮೂಲಕ ವಿಲೀನಗೊಳಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯಲ್ಲಿ ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 31 ಸೇಸಕಿ 2006, ಬೆಂಗಳೂರು, ದಿನಾಂಕ:31ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಸಿ.ಜಿ. ಶಕುಂತಳ, ದ್ವಿತೀಯ ದರ್ಜೆ ಸಹಾಯಕಿ, ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಚಿಕ್ಕಮಗಳೂರು ಇವರನ್ನು ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16(ಎ) (11) ರನ್ವಯ ಹಾಗೂ ಈ ಕೆಳಕಂಡ ಷರತ್ತಿಗೊಳಪಡಿಸಿ ಇವರನ್ನು ಉದ್ಯೋಗ ಮತ್ತು ತರಬೇತಿ ಇಲಾಖೆಯಿಂದ ಜಲಸಂಪನ್ಮೂಲ (ಸಣ್ಣ ನೀರಾವರಿ) ಇಲಾಖೆಯಲ್ಲಿ ವಿಲೀನಗೊಳಿಸಲು ಆದೇಶಿಸಿರುತ್ತದೆ.

1. ಸಂಬಂಧಪಟ್ಟ ನೌಕರರು ಸಕ್ರಮವಾಗಿ ನೇಮಕಗೊಂಡಿರತಕ್ಕದ್ದು ಹಾಗೂ ಅವರು ತಮ್ಮ ಮಾತೃ ಇಲಾಖೆಯಲ್ಲಿ ಪರಿವೀಕ್ಷಣಾವಧಿ/ ಸ್ಥಾನಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರತಕ್ಕದ್ದು.
2. ಸಂಬಂಧಪಟ್ಟ ನೌಕರರು ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಯ ವೇತನ ಶ್ರೇಣಿ ಮತ್ತು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಹುದ್ದೆಯ ವೇತನ ಶ್ರೇಣಿಗಳು ಸಮಾನ ವೇತನ ಶ್ರೇಣಿಗಳಾಗಿರತಕ್ಕದ್ದು.
3. ಸಂಬಂಧಪಟ್ಟ ನೌಕರರು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ವಿಲೀನವಾದ ಆರು ತಿಂಗಳೊಳಗೆ ತೇರ್ಗಡೆಯಾಗತಕ್ಕದ್ದು.
4. ಪ್ರಸ್ತಾಪಿತ ವರ್ಗಾವಣೆ ಮೂಲಕ ನೇಮಕಾತಿಗೆ ನೌಕರರ ಮಾತೃ ಇಲಾಖೆ ಹಾಗೂ ಇವರನ್ನು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಇಲಾಖೆಗಳು ಒಪ್ಪಿರತಕ್ಕದ್ದು.
5. ಈ ನೌಕರರ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು, 1957ರ ನಿಯಮ 6ರ ಮೊದಲನೇ ಪರಂತು ತದನುಸಾರ ನಿರ್ಧರಿಸತಕ್ಕದ್ದು. ಈ ಬಗ್ಗೆ ನೌಕರರ ಒಪ್ಪಿಗೆಯನ್ನು ಬರವಣಿಗೆ ಮೂಲಕ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1159

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಲೋಕೋಪಯೋಗಿ ಮತ್ತು ಇಂಧನ ಸಚಿವರ ಆಪ್ತ ಶಾಖೆಯಲ್ಲಿ ಎರಡು ಗ್ರೂಪ್ 'ಎ' ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಲೋಕೋಪಯೋಗಿ ಮತ್ತು ಇಂಧನ ಸಚಿವರ ಟಿಪ್ಪಣಿ ದಿನಾಂಕ:15.02.2006.

2. ಟಿಪ್ಪಣಿ ಸಂಖ್ಯೆ: ಸಿಎಂ/ 1253/ ಎಂಐಎನ್/ 2006, ದಿನಾಂಕ:21.06.2006.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 285 ಸಆಸೇ 200 (1), ಬೆಂಗಳೂರು, ದಿನಾಂಕ:29ನೇ ಜುಲೈ, 2006**

ಮೇಲೆ ಓದಲಾಗಿರುವ ಟಿಪ್ಪಣಿಯಲ್ಲಿ ಮಾನ್ಯ ಲೋಕೋಪಯೋಗಿ ಮತ್ತು ಇಂಧನ ಸಚಿವರ ಆಪ್ತ ಶಾಖೆಯಲ್ಲಿ ಡಾ: ಆರ್. ನರಸಿಂಹಮೂರ್ತಿ, ಕನ್ನಡ ಆಯ್ಕೆ ಶ್ರೇಣಿ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಹಾಗೂ ಶ್ರೀ ಕೆ.ಎ. ರಾಜಗೋಪಾಲ್, ಉಪ ನಿರ್ದೇಶಕರು (ಮಾರುಕಟ್ಟೆ), ಕರ್ನಾಟಕ ಹಾಲು ಮಹಾಮಂಡಳಿ, ಬೆಂಗಳೂರು ಅವರನ್ನು ಕ್ರಮವಾಗಿ ವಿಶೇಷ ಕರ್ತವ್ಯಾಧಿಕಾರಿಯಾಗಿ ಮತ್ತು ವಿಶೇಷಾಧಿಕಾರಿಯಾಗಿ ನೇಮಿಸುವಂತೆ ಕೋರಲಾಗಿದೆ. ಅದರಂತೆ ಅವರನ್ನು ನೇಮಿಸುವ ಲೋಕೋಪಯೋಗಿ ಮತ್ತು ಇಂಧನ ಸಚಿವರ ಆಪ್ತ ಶಾಖೆಯಲ್ಲಿ ಎರಡು ಗ್ರೂಪ್-ಎ ಹುದ್ದೆಗಳನ್ನು ದಿನಾಂಕ:21.06.2006 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಅಧಿಕಾರಿಯವರುಗಳ ಸೇವೆಯು ಆಪ್ತ ಶಾಖೆಯಲ್ಲಿ ಅವಶ್ಯವಿರುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1192 ವೆಚ್ಚ-5/ 2006, ದಿನಾಂಕ:21.07.2006ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್. 1161

**ವಿಷಯ:** ಶ್ರೀ ಎಂ. ಅಮರನಾಥ ಸುಮತಿ, ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ:ಸಿಆಸುಇ 3 ಎಸ್ಇಎನ್ 2000, ದಿನಾಂಕ:06.10.2005.

2. ಶ್ರೀ ಅಮರನಾಥ ಸುಮತಿ, ಕೆಎಎಸ್ ಅಧಿಕಾರಿ ಅವರ ದಿನಾಂಕ:29.10.2005ರ ಉತ್ತರ.

**ಪ್ರಸ್ತಾವನೆ:**

ಕೊಡಗು ಜಿಲ್ಲೆಯ ಮಡಿಕೇರಿ ಉಪ ವಿಭಾಗಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಭೂಸುಧಾರಣಾ ತಿದ್ದುಪಡಿ ನಿಯಮಗಳೂ 1998ರ ನಿಯಮ 26(ಸಿ) ಮತ್ತು ಭೂಸುಧಾರಣಾ ಕಾಯ್ದೆ 1961ರ ಕಲಂ 77(ಎ)ನ್ನು ಉಲ್ಲಂಘನೆ ಮಾಡಿ ಫಾರಂ 7(ಎ) ಅರ್ಜಿಗಳಲ್ಲಿ ತಮ್ಮ ಅಧಿಕಾರ ವ್ಯಾಪ್ತಿ ಮೀರಿ ಹಾಗೂ ಕಾನೂನು ನಿಯಮ ಸುತ್ತೋಲೆಗಳನ್ನು ಉಲ್ಲಂಘಿಸಿರುವ ಆರೋಪಗಳಿಗಾಗಿ ಶ್ರೀ ಎಂ. ಅಮರನಾಥ ಸುಮತಿ, ಕೆಎಎಸ್ ಅಧಿಕಾರಿ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ:06.10.2005ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ:29.10.2005ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿ/ನೌಕರರು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3 ಎಸ್ಇಎನ್ 2000, ಬೆಂಗಳೂರು, ದಿನಾಂಕ:28ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎ.ಎಸ್. ಶ್ರೀಕಾಂತ್, ಐ.ಎ.ಎಸ್., ಪ್ರಾದೇಶಿಕ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಮೈಸೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕೊಡಗು ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಯವರು ಈ ಉದ್ದೇಶಕ್ಕೆ ಮೈಸೂರು ಪ್ರಾದೇಶಿಕ ಆಯುಕ್ತರ ಕಛೇರಿಯ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಮತ್ತು ಸ್ಟೇಷನರಿಗಳನ್ನು ಉಪಯೋಗಿಸುವುದು. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

ಪಿ.ಆರ್. 1160

## INFRASTRUCTURE DEVELOPMENT SECRETARIAT

**Sub:** Suminfra 2006-A summit on Sustainable PPPs in Infrastructure to be held on 3rd August 2006, in Chennai-deputation of Officers-reg.

**Read:** Letter No. Nil Dated 31st July 2006 from Smt. Sandhya Satwadi, Head-Karnataka State Officer Confederation of Indian Industry.

**Preamble:**

The Confederation of Indian Industry, Bangalore in their letter Dated:31st July 2006 read above, have invited Senior Officers of Government of Karnataka to participate in the panel discussion at the SIIP Session on Invest Karnataka on 3rd August 2006 in Chennai. Government have decided to send the delegation of the following Officers to participate in the above Suminfra-2006:

1. Mr. Sudhir Krishna, Metropolitan Commissioner, BMRDA, Bangalore.
2. Mr. Vinay Kumar, Principal Secretary to Government of Karnataka, Infrastructure Development Department.
3. Miss. Lakhmi Venkatachalam, Principal Secretary to Government of Karnataka, Urban Development Department.
4. Dr. Raj Kumar Khatri, Commissioner for Industrial Development and Director of Industries and Commerce, Bangalore.
5. Dr. I.M. Vittal Murthy, Principal Secretary to Government of Karnataka, Kannada and Culture, Information and Tourism Department.
6. Mr. P.V. Ravi, Managing Director, iDeCK, Bangalore.

Hence this order.

**Government Order No. IDD 60 IDM 2006, Bangalore, Dated:1st August, 2006**

Government is pleased to permit the following Senior Officers to participate in the discussion on Suminfra 2006 to be held on 3rd August 2006 in Chennai.

1) Mr. Sudhir Krishna.
2) Mr. Vinay Kumar.
3) Miss. Lakhmi Venkatachalam.

4) Dr. Raj Kumar Khatri.
5) Dr. I.M Vittal Murthy.
6) Mr. P.V. Ravi.

The officers are permitted to draw admissible TA/DA for their to & from journey.

This order issues with the approval of the Cheif Secretary to Government of Karnataka vide No.CS/6925/ Comp 06 Dated:01.08.2006.

By Order and in the name of Governor of Karnataka,
**N. MANJULA GEETHA**
Under Secretary to Government,
Infrastructure Development Department.

PR-1162

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಕೋಲಾರ ಜಿಲ್ಲೆಯ, ಚಿಂತಾಮಣಿಯ ಶ್ರೀ ವಿನಾಯಕ ಎಜುಕೇಷನ್ ಟ್ರಸ್ಟ್‌ನ ಪ್ರಗತಿ ಕಾಲೇಜ್ ಆಫ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1. ದಿನಾಂಕ:31.12.2003ರ ಸಂಖ್ಯೆ: ಇಡಿ 372 ಯುಆರ್‌ಸಿ 2003ರ ಸರ್ಕಾರಿ ಆದೇಶ.
2. ದಿನಾಂಕ:21.12.2005, ಸಂಖ್ಯೆ:F.SRO/ NCTE/ B.Ed/ 2005-06/4801 ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿನಾಂಕ:05.07.2006ರ ಅಧ್ಯಕ್ಷರು, ಶ್ರೀ ವಿನಾಯಕ ಎಜುಕೇಷನ್ ಟ್ರಸ್ಟ್, ಚಿಂತಾಮಣಿ ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೆ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಕೋಲಾರ ಜಿಲ್ಲೆಯ ಚಿಂತಾಮಣಿಯ ಶ್ರೀ ವಿನಾಯಕ ಎಜುಕೇಷನ್ ಟ್ರಸ್ಟ್‌ನ ಪ್ರಗತಿ ಕಾಲೇಜ್ ಆಫ್ ಎಜುಕೇಷನ್, ಎಂ.ಜಿ. ರಸ್ತೆ, ಚಿಂತಾಮಣಿ, ಕೋಲಾರ ಜಿಲ್ಲೆ, ಈ ಕಾಲೇಜಿಗೆ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:21.12.2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ:05.07.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 223 ಯುಬಿವಿ 2006, ಬೆಂಗಳೂರು, ದಿನಾಂಕ:27ನೇ ಜುಲೈ, 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೆ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೋಲಾರ ಜಿಲ್ಲೆಯ ಚಿಂತಾಮಣಿಯ ಶ್ರೀ ವಿನಾಯಕ ಎಜುಕೇಷನ್ ಟ್ರಸ್ಟ್‌ನ ಪ್ರಗತಿ ಕಾಲೇಜ್ ಆಫ್ ಎಜುಕೇಷನ್, ಎಂ.ಜಿ. ರಸ್ತೆ, ಚಿಂತಾಮಣಿ, ಕೋಲಾರ ಜಿಲ್ಲೆ, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. 1163

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಮಂಜೂರಾಗಿರುವ ಅಧೀನ ಕಾರ್ಯದರ್ಶಿ (ಗ್ರೂಪ್-ಎ) ಹುದ್ದೆಯನ್ನು ರೂ.10620-14960 ವೇತನ ಶ್ರೇಣಿಯ ಉಪಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸುವ ಕುರಿತು.

**ಓದಲಾಗಿದೆ:** ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಸಿಎಂ 279 ಜಿಇಎನ್ 06 ದಿನಾಂಕ:18.07.2006.

**ಪ್ರಸ್ತಾವನೆ:**

ಮೇಲೆ ಓದಲಾದ ಟಿಪ್ಪಣಿಯಲ್ಲಿ ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಎಂ.ಎಸ್. ಮಂಜುನಾಥ್‌ರವರಿಗೆ ದಿನಾಂಕ:07.07.2006ರ ಅಧಿಸೂಚನೆಯಲ್ಲಿ ಉಪಕಾರ್ಯದರ್ಶಿ ವೃಂದಕ್ಕೆ ಬಡ್ತಿ ನೀಡಿ ಸಮಾಜ ಕಲ್ಯಾಣ ಇಲಾಖೆಗೆ ನೇಮಿಸಲಾಗಿದೆ. ಆದರೆ ಸದರಿಯವರ ಸೇವೆಯು ಮುಖ್ಯಮಂತ್ರಿಯವರ ಸಚಿವಾಲಯಕ್ಕೆ ಅಗತ್ಯವಿರುವುದರಿಂದ ಸಮಾಜ ಕಲ್ಯಾಣ ಇಲಾಖೆಗೆ ನೇಮಿಸಿದ ಆದೇಶವನ್ನು ರದ್ದುಪಡಿಸಿ, ಮುಖ್ಯಮಂತ್ರಿಯವರ ಸಚಿವಾಲಯದ ಅಧೀನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ:19.07.2006 ರಿಂದ ಜಾರಿಗೆ ಬರುವಂತೆ ರೂ.10620-14960 ರ ವೇತನ ಶ್ರೇಣಿಯ ಉಪಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿ, ಅವರನ್ನು ಆ ಹುದ್ದೆಯಲ್ಲಿ ಮುಂದುವರಿಸಲು ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 408 ಸಅಸೇ 2005, ಬೆಂಗಳೂರು, ದಿನಾಂಕ:3ನೇ ಆಗಸ್ಟ್, 2006**

ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಮಂಜೂರಾಗಿರುವ ಅಧೀನ ಕಾರ್ಯದರ್ಶಿ, (ಗ್ರೂಫ್-ಎ) ಹುದ್ದೆಯನ್ನು ದಿನಾಂಕ:19.07.2006 ರಿಂದ ಜಾರಿಗೆ ಬರುವಂತೆ ಹಾಗೂ ಮುಖ್ಯಮಂತ್ರಿಯವರ ಪದಾವಧಿಯವರೆಗೆ ಅಥವಾ ಶ್ರೀ ಎಂ.ಎಸ್. ಮಂಜುನಾಥರವರ ಸೇವೆಯು ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಅವಶ್ಯವಿರುವವರೆಗೆ ಅಥವಾ ಮುಂದಿನ ಆದೇಶದವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ರೂ.10620-14960ರ ವೇತನ ಶ್ರೇಣಿಯ ಉಪಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/ 549/ ಸೇ-4/ 06, ದಿನಾಂಕ:26.07.2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್. 1164

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಆರ್ಥಿಕ ಇಲಾಖೆಯ ಲೋಕೋಪಯೋಗಿ ಆರ್ಥಿಕ ಕೋಶದ ಸಂಗ್ರಹಣಾ ಕೋಶವನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 39 ಸಸಿವಿ 2002, ದಿನಾಂಕ:16.07.2003.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 66 ಸಸಿವಿ 2005, ದಿನಾಂಕ:28.10.2005.
3. ಕಡತ ಸಂಖ್ಯೆ: ಎಫ್‌ಡಿ 65 ಪಿಸಿಎಲ್ 2004.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 16.07.2003ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಲೋಕೋಪಯೋಗಿ ಆರ್ಥಿಕ ಕೋಶದಲ್ಲಿ ಸಂಗ್ರಹಣ ಕೋಶವನ್ನು ದಿನಾಂಕ:16.07.2003 ರಿಂದ ಈ ಕೆಳಕಂಡ ಸಿಬ್ಬಂದಿಯನ್ನೊಳಗೊಂಡಂತೆ ತಕ್ಷಣದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಿ ಮಂಜೂರಾತಿ ನೀಡಲಾಗಿದೆ.

| | |
|---|---|
| 1. ಉಪಕಾರ್ಯದರ್ಶಿ | 1 ಹುದ್ದೆ |
| 2. ಶೀಘ್ರಲಿಪಿಗಾರ | 1 ಹುದ್ದೆ |
| 3. ಕಿರಿಯ ಸಹಾಯಕ | 1 ಹುದ್ದೆ |

ತದನಂತರ ದಿನಾಂಕ:28.10.2005ರ ಸರ್ಕಾರದ ಆದೇಶದಲ್ಲಿ ಕೊನೆಯದಾಗಿ ಮುಂದುವರಿಸಿದ ಅವಧಿಯು ದಿನಾಂಕ:15.07.2006ರಂದು ಮುಕ್ತಾಯಗೊಂಡಿದ್ದರಿಂದ ಮೇಲೆ ಓದಲಾದ ಕಡತದಲ್ಲಿ ಈ ಅವಧಿಯಲ್ಲಿ ದಿನಾಂಕ:16.07.2005 ರಿಂದ 2 ವರ್ಷದ ಅವಧಿಗೆ ಮುಂದುವರಿಸಲು ಪ್ರಸ್ತಾಪಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 63 ಸಸಿವಿ 2006, ಬೆಂಗಳೂರು, ದಿನಾಂಕ:2ನೇ ಆಗಸ್ಟ್, 2006**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಆರ್ಥಿಕ ಇಲಾಖೆಯಲ್ಲಿ ಲೋಕೋಪಯೋಗಿ ಆರ್ಥಿಕ ಕೋಶದಲ್ಲಿ ಸಂಗ್ರಹಣಾ ಕೋಶವನ್ನು ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:16.07.2006 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| | |
|---|---|
| 1. ಉಪಕಾರ್ಯದರ್ಶಿ | 1 ಹುದ್ದೆ |
| 2. ಶೀಘ್ರಲಿಪಿಗಾರ | 1 ಹುದ್ದೆ |
| 3. ಕಿರಿಯ ಸಹಾಯಕ | 1 ಹುದ್ದೆ |

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.07.96ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್. 1165

**ವಿಷಯ:** ಶ್ರೀಮತಿ ಸಿ. ಲಲಿತ, ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ:ಸಿಆಸುಇ 11 ಎಸ್‌ಇಎನ್ 05, ದಿನಾಂಕ:27.02.2006.
2. ಶ್ರೀ ಸಿ. ಲಲಿತ, ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ:25.04.2006.

**ಪ್ರಸ್ತಾವನೆ:**

ಶ್ರೀಮತಿ ಸಿ. ಲಲಿತ, ಕೆಎಎಸ್ ಅಧಿಕಾರಿ ಅವರು ಜಯದೇವ ಹೃದ್ರೋಗ ಸಂಸ್ಥೆಯಲ್ಲಿ ಮುಖ್ಯ ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀಮತಿ ಕಸ್ತೂರಿ ಡಿ. ಮಲ್ಯ ಮತ್ತು ಅವರ ಸಹೋದರಿಗೆ ಬೆಂಗಳೂರು ದಕ್ಷಿಣ ತಾಲ್ಲೂಕಿನ ವಿದ್ಯಾಸಾಗರ ಗ್ರಾಮದಲ್ಲಿ ನಿವೇಶನ ಕೊಡಿಸುವುದಾಗಿ ಭರವಸೆ ನೀಡಿ ಹಣ ಪಡೆದು ವಂಚಿಸಿರುವ ಹಾಗೂ ನಡತೆ ನಿಯಮಗಳನ್ನು ಉಲ್ಲಂಘಿಸಿ ಖಾಸಗಿ ವೃತ್ತಿಯಲ್ಲಿ ತೊಡಗಿಸಿಕೊಂಡ ಆರೋಪಕ್ಕಾಗಿ ಶ್ರೀಮತಿ ಸಿ. ಲಲಿತ, ಕೆಎಎಸ್ ಅಧಿಕಾರಿ ಇವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ:27.02.2006ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ

ಮೇಲೆ (2)ರಲ್ಲಿ ಓದಲಾದ ದಿನಾಂಕ:25.04.2006ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿಯು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಎಸ್‌ಇಎನ್ 05, ಬೆಂಗಳೂರು, ದಿನಾಂಕ:28ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ. ಈಶ್ವರ ಭಟ್ ಕುಕ್ಕೆಮನೆ, ನಿವೃತ್ತ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 05 ದಿನಾಂಕ:23.08.2005 ರನ್ವಯ ರೂ.6,000/- (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ದಿನಾಂಕ:04.03.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಪ್ರಕಾಶ್‌ರಾವ್ ಕೇಸರ್‌ಕರ್, ಶಾಖಾಧಿಕಾರಿ, ಸಿಆಸುಇ (ಸೇವೆಗಳು-ಇ) ರವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘರಾಮ್ ಭಂಡಾರಿ**

ಪಿ.ಆರ್. 1166

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಎಫ್.ಆರ್. ಸಂಬರಗಿ, ಸರ್ಕಾರದ ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಬಿ.ಎನ್. ಶಿವಶಂಕರ್, ಹಿರಿಯ ಸಹಾಯಕ ಅವರ ವಿರುದ್ಧ ಇಲಾಖಾ ವಿಚಾರಣೆ- ಆರೋಪಮುಕ್ತರನ್ನಾಗಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 18 ಎಸ್‌ಇಎನ್ 05, ದಿನಾಂಕ:15.06.2005.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 18 ಎಸ್‌ಇಎನ್ 2005, ದಿನಾಂಕ:03.11.2005 ಮತ್ತು 14.03.2006.
3. ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಅವರ ದಿನಾಂಕ:02.02.2006 ಮತ್ತು 22.06.2006ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀ ಎಫ್.ಆರ್. ಸಂಬರಗಿ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರು ಶಿಕ್ಷಣ ಇಲಾಖೆಯ ಸೇವೆಗಳು-1,2 ಶಾಖೆಗಳ ಅಧೀನ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಸೇವೆಗಳು-1 ಶಾಖೆಯಲ್ಲಿ ಹಿರಿಯ / ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಬಿ.ಎನ್. ಶಿವಶಂಕರ್ ಅವರೊಂದಿಗೆ ಶಾಮೀಲಾಗಿ ಮೇಲಾಧಿಕಾರಿಗಳ ಯಾವುದೇ ಆದೇಶವಿಲ್ಲದೆ ಶ್ರೀ ಜೆ. ರಾಜು, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢ ಶಾಲೆ, ಕೆ. ಬೆಳತ್ತೂರು, ಹೆಗ್ಗಡದೇವನಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ ಅವರನ್ನು ಖೊಟ್ಟಿ/ ಬೋಗಸ್ ವರ್ಗಾವಣೆ ಆದೇಶ/ ಅಧಿಸೂಚನೆ ಸಂಖ್ಯೆ: ಇಡಿ 432 ಎಸ್-ವರ್ಗ 2004 ದಿನಾಂಕ:23.11.2004ನ್ನು ಸೃಷ್ಟಿಸಿ ಅದರ ಮೂಲಕ ಮೈಸೂರಿನ ಪ್ರ-ಶಿಕ್ಷಣ ಸಂಸ್ಥೆ (ಟಿಟಿಐ) ಯಲ್ಲಿನ ಬಡ್ತಿಯಿಂದ ಖಾಲಿಯಾದ ಅಧೀಕ್ಷಕರ ಹುದ್ದೆಗೆ ವರ್ಗಾಯಿಸಲು ಪ್ರಯತ್ನಿಸಿ ಅಧಿಕಾರ ದುರುಪಯೋಗ ಪಡಿಸಿಕೊಂಡಿದ್ದಾರೆ ಎಂಬ ಆರೋಪಗಳಿಗಾಗಿ ಶ್ರೀ ಎಫ್.ಆರ್. ಸಂಬರಗಿ, ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಬಿ.ಎನ್. ಶಿವಶಂಕರ್, ಹಿರಿಯ ಸಹಾಯಕ ಇವರುಗಳಿಗೆ ಮೇಲೆ (1)ರಲ್ಲಿ ಓದಲಾದ ನೋಟೀಸ್ ಜಾರಿ ಮಾಡಿ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ನೋಟೀಸಿಗೆ ಉತ್ತರ ನೀಡಿದ ಆರೋಪಿತ ಅಧಿಕಾರಿ/ ನೌಕರರು ಆರೋಪವನ್ನು ನಿರಾಕರಿಸಿದ್ದುದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ಕಂಡುಕೊಳ್ಳುವ ಸಲುವಾಗಿ ಮೇಲೆ (2)ರಲ್ಲಿ ಓದಲಾದ ದಿನಾಂಕ:03.11.2005ರ ಸರ್ಕಾರಿ ಆದೇಶದಲ್ಲಿ ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ಮುಖ್ಯ ಸಾಕ್ಷಿದಾರರಾದ ಶ್ರೀ ಎಸ್.ಕೆ. ರಮೇಶ್ ಅವರ ಹೇಳಿಕೆ ಪಡೆದು ಅಂತಿಮ ವರದಿಯನ್ನು ಸಲ್ಲಿಸಲು ದಿನಾಂಕ:14.03.2006ರ ಆದೇಶದಲ್ಲಿ ವಿಚಾರಣಾಧಿಕಾರಿಯವರಿಗೆ ಸೂಚಿಸಲಾಯಿತು. ಸದರಿ ಆದೇಶಗಳ ಅನುಸಾರ ವಿಚಾರಣಾಧಿಕಾರಿ ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಮೇಲೆ (3)ರಲ್ಲಿ ಓದಲಾದ ದಿನಾಂಕ:02.02.2006 ಮತ್ತು 22.06.2006ರ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ. ವಿಚಾರಣಾ ವರದಿಯಲ್ಲಿ ದಿನಾಂಕ:23.11.2004ರ ಅಧಿಸೂಚನೆಯ ಅಸಲು ಪ್ರತಿಯನ್ನು ಹಾಜರುಪಡಿಸಿರುವುದಿಲ್ಲ; ಶ್ರೀ ಜೆ. ರಾಜು, ಮುಖ್ಯ ಶಿಕ್ಷಕರು ಆಪಾದಿತರಿಗೆ ಯಾವುದೇ ಹಣ ಕೊಟ್ಟಿರುವುದಿಲ್ಲವೆಂದು ತಿಳಿಸಿರುತ್ತಾರೆ; ಫಿರ್ಯಾದುದಾರರು 1 ಮತ್ತು 2ನೇ ಆರೋಪಿತ ಸರ್ಕಾರಿ ಅಧಿಕಾರಿಗಳ ಮೇಲೆ ಹೊರಿಸಿದ ಆರೋಪಗಳನ್ನು ಸಾಬೀತುಪಡಿಸಲು ವಿಫಲರಾಗಿದ್ದಾರೆ ಎಂಬುದಾಗಿ ತೀರ್ಮಾನಿಸಿ ತೀರ್ಪು ನೀಡಿರುತ್ತಾರೆ.

ಈ ವಿಚಾರಣಾ ವರದಿಯನ್ನು ಆರೋಪಣಾ ದಾಖಲೆಗಳೊಂದಿಗೆ ಪುನರ್ ಪರಿಶೀಲಿಸಲಾಯಿತು. ಪ್ರಸ್ತಾಪಿತ ದಿನಾಂಕ:23.11.2004ರ ಬೋಗಸ್ ಅಧಿಸೂಚನೆಯ ಅನುಸಾರ ಶ್ರೀ ಜೆ. ರಾಜು, ಮುಖ್ಯಶಿಕ್ಷಕರು, ಸರ್ಕಾರಿ ಪ್ರೌಢ ಶಾಲೆ, ಕೆ. ಬೆಳತ್ತೂರು, ಮೈಸೂರು ಜಿಲ್ಲೆ ಇವರು ಮೇಲಾಧಿಕಾರಿಗಳ ಅನುಮತಿ ಇಲ್ಲದೆ ಬಿಡುಗಡೆ ಹೊಂದಿ ಮೈಸೂರಿನ ಮಹಾರಾಣಿ ಮಹಿಳಾ ಶಿಕ್ಷಣ ಸಂಸ್ಥೆಯ ಅಧೀಕ್ಷಕ ಹುದ್ದೆಯಲ್ಲಿ ದಿನಾಂಕ:10.12.2004ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಈ ಪ್ರಕರಣದಲ್ಲಿನ ಆರೋಪಿತ ಅಧಿಕಾರಿ/ ನೌಕರರು ರವರು ಶ್ರೀ ಜೆ. ರಾಜು ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ಪತ್ರ ಬರೆದಿರುವರು. ಶ್ರೀ ಜೆ. ರಾಜು ಅವರನ್ನು ಅಮಾನತ್ತುಗೊಳಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಮುಂದುವರಿಸಲಾಗುತ್ತಿದೆಯೆಂದು ಆಡಳಿತ ಇಲಾಖೆ ತಿಳಿಸಿದೆ. ಶ್ರೀ ಸಂಬರಗಿ ಹಾಗೂ ಶ್ರೀ ಶಿವಶಂಕರ್ ಅವರ ವಿರುದ್ಧ ಸರ್ಕಾರಕ್ಕೆ ಯಾರೂ ದೂರು ಸಲ್ಲಿಸಿರುವುದಿಲ್ಲ. ಅನುಮಾನದ ಮೇಲೆ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಮೇಲೆ (3) ರಲ್ಲಿ ಓದಲಾದ ವಿಚಾರಣಾ ವರದಿಯನ್ವಯ ಆರೋಪಿತರಾದ ಶ್ರೀ ಎಫ್.ಆರ್. ಸಂಬರಗಿ, ಸರ್ಕಾರದ ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಬಿ.ಎನ್. ಶಿವಶಂಕರ್, ಹಿರಿಯ

ಸಹಾಯಕರ ವಿರುದ್ಧ ಮಾಡಲಾಗಿರುವ ಆರೋಪಗಳು ಸಾಬೀತಾಗಿಲ್ಲವೆಂಬ ವಿಚಾರಣಾಧಿಕಾರಿಯವರ ನಿರ್ದಿಷ್ಟ ನಿರ್ಣಯದ ಹಿನ್ನೆಲೆಯಲ್ಲಿ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಎಸ್‌ಇಎನ್ 2005, ಬೆಂಗಳೂರು, ದಿನಾಂಕ:28ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಶ್ರೀ ಎಫ್.ಆರ್. ಸಂಬರಗಿ, ಸರ್ಕಾರದ ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಬಿ.ಎನ್.ಶಿವಶಂಕರ್, ಹಿರಿಯ ಸಹಾಯಕ ಅವರುಗಳನ್ನು ದಿನಾಂಕ:15.06.2005ರ ನೋಟೀಸ್‌ನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀ ಎಫ್.ಆರ್. ಸಂಬರಗಿ, ಸರ್ಕಾರದ ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಬಿ.ಎನ್. ಶಿವಶಂಕರ್, ಹಿರಿಯ ಸಹಾಯಕ ಅವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1167

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಚಿವ ಸಂಪುಟ) ಶಾಖೆಯಲ್ಲಿ ಒಂದು ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯ ಸೃಜನೆ.

**ಪ್ರಸ್ತಾವನೆ:**

ಪ್ರಸ್ತುತ ಸಚಿವ ಸಂಪುಟ ಶಾಖೆಯ ಜಂಟಿ ಕಾರ್ಯದರ್ಶಿಯವರು ದಿನಾಂಕ:31.10.2006ರಂದು ಸೇವೆಯಿಂದ ನಿವೃತ್ತಿ ಹೊಂದಲಿರುವರು. ಸದರಿ ಅಧಿಕಾರಿಯವರು ನಿವೃತ್ತಿ ಹೊಂದುವ ಮೊದಲೇ, ಮುಂದೆ ಆ ಹುದ್ದೆಗೆ ನೇಮಕಗೊಳ್ಳಲಿರುವ ಅಧಿಕಾರಿಗೆ ಸಚಿವ ಸಂಪುಟ ವ್ಯವಹಾರಗಳ ಶಾಖೆಯ ಕೆಲಸಕಾರ್ಯಗಳನ್ನು ಜಂಟಿ ಕಾರ್ಯದರ್ಶಿ, ಸಚಿವ ಸಂಪುಟ ಶಾಖೆ, ಅವರು ತರಬೇತಿ ನೀಡಬೇಕಾಗುತ್ತದೆ. ಇದಕ್ಕೆ ಅನುಕೂಲವಾಗುವಂತೆ ಸಚಿವ ಸಂಪುಟ ಶಾಖೆಯಲ್ಲಿ ಒಂದು ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು ಸೃಜಿಸಬೇಕಾಗಿರುವುದನ್ನು ಮನಗಂಡು ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 198 ಸಆಸೇ 2006(1), ಬೆಂಗಳೂರು, ದಿನಾಂಕ:2ನೇ ಆಗಸ್ಟ್, 2006**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸಚಿವ ಸಂಪುಟ ಶಾಖೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ದಿನಾಂಕ:31.10.2006ರವರೆಗೆ ರೂ.10620-14960ರ ವೇತನ ಶ್ರೇಣಿಯ ಒಂದು ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು ಸೃಜಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/1396 ವೆಚ್ಚ:5:/ 2006 ದಿನಾಂಕ:01.08.2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1168

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

**ವಿಷಯ:** ಸಾರ್ವಜನಿಕ ಉದ್ದಿಮೆಗಳ ಇಲಾಖೆಯು ನಿರ್ವಹಿಸುತ್ತಿದ್ದ ಲೆಕ್ಕ ಸಿಆಸುಇಲಾಖೆಯ ಲೆಕ್ಕಪತ್ರ ಶಾಖೆ (1), (2) ಮತ್ತು (ಐಆರ್‌ಎಲ್‌ಎ) ಗಳು ನಿರ್ವಹಿಸಲು ಅಧಿಕಾರ ನೀಡುವ ಕುರಿತು.

**ಓದಲಾಗಿದೆ:** 27.06.2006ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 50 ಸಸಿವಿ 2006.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರ ಆದೇಶದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯಲ್ಲಿನ ಕೆಲವು ಹುದ್ದೆಗಳ ಪದನಾಮವನ್ನು ಪುನರ್ ಪದನಾಮೀಕರಿಸುವುದರ ಜೊತೆಗೆ ಆ ಇಲಾಖೆಯಲ್ಲಿ ಅಸ್ತಿತ್ವದಲ್ಲಿದ್ದ ಲೆಕ್ಕಪತ್ರ ಶಾಖೆಯನ್ನು ರದ್ದುಗೊಳಿಸಿ, ಸದರಿ ಇಲಾಖೆಯಲ್ಲಿನ ಎಲ್ಲಾ ಅಧಿಕಾರಿ/ ನೌಕರರುಗಳ ಸಂಬಳ ಮತ್ತು ಇತರೆ ಭತ್ಯೆಗಳನ್ನು ಜುಲೈ 2006 ಮಾಹೆಯಿಂದ ಸಿಆಸುಇ (ಲೆಕ್ಕಪತ್ರಗಳು-1, 2 ಹಾಗೂ ಐಆರ್‌ಎಲ್‌ಎ) ವಿಭಾಗಗಳ ಮೂಲಕ ವಿತರಿಸಲು ಮಂಜೂರಾತಿ ನೀಡಲಾಗಿದೆ. ಆದ್ದರಿಂದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ನಿರ್ವಹಿಸುತ್ತಿದ್ದ ಲೆಕ್ಕ ಶೀರ್ಷಿಕೆ 3451-00-091-0-01 ಮತ್ತು 3451-00-091-0-02ಗಳನ್ನು ಕ.ಸ.ಸ. ಲೆಕ್ಕಪತ್ರ ಶಾಖೆ (1), (2) ಮತ್ತು (ಐಆರ್‌ಎಲ್‌ಎ)ಗಳು ನಿರ್ವಹಿಸಲು ಅಧಿಕಾರ ನೀಡುವ ಕುರಿತ ಅಗತ್ಯತೆಯನ್ನು ಮನಗಂಡು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 59 ಸಸಿವಿ 2006, ಬೆಂಗಳೂರು, ದಿನಾಂಕ:3ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಸಿಆಸುಇ (ಲೆಕ್ಕಪತ್ರಗಳು-1, 2 ಹಾಗೂ ಐಆರ್‌ಎಲ್‌ಎ) ವಿಭಾಗಗಳ ಈಗಾಗಲೇ ನಿರ್ವಹಿಸುತ್ತಿರುವ ಲೆಕ್ಕಶೀರ್ಷಿಕೆಗಳ ಜೊತೆಗೆ ಸಾರ್ವಜನಿಕ ಉದ್ದಿಮೆಗಳ ಇಲಾಖೆಯು ನಿರ್ವಹಿಸುತ್ತಿದ್ದ ಲೆಕ್ಕ ಶೀರ್ಷಿಕೆ "3451-00-091-0-01" ಮತ್ತು "3451-00-091-0-02" ಗಳನ್ನು ಸಹ ನಿರ್ವಹಿಸಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅ.ಟಿ. ಸಂಖ್ಯೆ: ಎಫ್‌ಡಿ 1333 ವೆಚ್ಚ-3/ 2006, ದಿನಾಂಕ:02.08.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1169

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಮಹಾತ್ಮಗಾಂಧಿ ವಿದ್ಯಾ ಪೀಠ ಟ್ರಸ್ಟ್‌ನ ದಯಾನಂದ ಸಾಗರ್ ಕಾಲೇಜ್ ಆಫ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1. ದಿನಾಂಕ:27.12.2003ರ ಸಂಖ್ಯೆ: ಇಡಿ 424 ಯುಆರ್‌ಸಿ 2003ರ ಸರ್ಕಾರಿ ಆದೇಶ.

2. ದಿನಾಂಕ:30.12.2004, ಸಂಖ್ಯೆ:F.SRO/ NCTE/ B.Ed/ 2004-05/9782 ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

3. ದಿನಾಂಕ:05.05.2006ರ ಕಾರ್ಯದರ್ಶಿ, ಮಹಾತ್ಮಗಾಂಧಿ ವಿದ್ಯಾ ಪೀಠ ಟ್ರಸ್ಟ್, ಶ್ಯಾವಿಗೆ ಮಲ್ಲೇಶ್ವರ ಹಿಲ್ಸ್, ಕುಮಾರ್‌ಸ್ವಾಮಿ ಲೇಔಟ್, ಬೆಂಗಳೂರು ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೆ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ಮಹಾತ್ಮಗಾಂಧಿ ವಿದ್ಯಾ ಪೀಠ ಟ್ರಸ್ಟ್‌ನ ದಯಾನಂದ ಸಾಗರ್ ಕಾಲೇಜ್ ಆಫ್ ಎಜುಕೇಷನ್, ಶ್ಯಾವಿಗೆ ಮಲ್ಲೇಶ್ವರ ಹಿಲ್ಸ್, ಕುಮಾರ್‌ಸ್ವಾಮಿ ಲೇಔಟ್, ಬೆಂಗಳೂರು ಈ ಕಾಲೇಜಿಗೆ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:30.12.2004ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ:05.05.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಕಾರ್ಯದರ್ಶಿಯವರು ತಮ್ಮ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 216 ಯುಬಿವಿ 2006, ಬೆಂಗಳೂರು, ದಿನಾಂಕ:24ನೇ ಜುಲೈ, 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೆ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ಮಹಾತ್ಮಗಾಂಧಿ ವಿದ್ಯಾಪೀಠ ಟ್ರಸ್ಟ್‌ನ ದಯಾನಂದ ಸಾಗರ್ ಕಾಲೇಜ್ ಆಫ್ ಎಜುಕೇಷನ್, ಶ್ಯಾವಿಗೆ, ಮಲ್ಲೇಶ್ವರ ಹಿಲ್ಸ್, ಕುಮಾರ್‌ಸ್ವಾಮಿ ಲೇಔಟ್, ಬೆಂಗಳೂರು, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 1170

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** 2006-07ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ಹಾಗೂ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳಲ್ಲಿನ ವಿದ್ಯಾರ್ಥಿಗಳ ಸಂಖ್ಯಾಬಲ ಹೆಚ್ಚಿಸುವ ಆದೇಶ ಕುರಿತು.

**ಉಲ್ಲೇಖ:** 1. ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಸಂ.ಹಿಂವನಿ: ವನಿಶಾ-2:ಸಿಆರ್-7: 2006-07, ದಿನಾಂಕ:20.05.2006.

2. ದಿನಾಂಕ:30.06.2006ರಂದು ನಡೆದ ಅಧಿಕಾರಯುಕ್ತ ಸಮಿತಿಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:20.05.2006ರ ಪತ್ರದಲ್ಲಿ ಆಯುಕ್ತರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರು ಪ್ರಸ್ತಾವನೆ ಸಲ್ಲಿಸಿ, ಮೆಟ್ರಿಕ್ ನಂತರದ ಹಾಗೂ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳಿಗೆ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಂದ ಪ್ರವೇಶಕ್ಕೆ ಅತಿ ಹೆಚ್ಚಿನ ಬೇಡಿಕೆ ಇರುವುದಾಗಿ ತಿಳಿಸಿ, ಸಂಖ್ಯಾಬಲವನ್ನು ಹೆಚ್ಚಿಸಲು ಕೋರುತ್ತಾ 2006-07ನೇ ಸಾಲಿನಲ್ಲಿ ರಾಜ್ಯ ವಲಯ ಯೋಜನಾ ಲೆಕ್ಕ ಶೀರ್ಷಿಕೆ ಲೆಕ್ಕಶೀರ್ಷಿಕೆ 2225-03-277-2-53-059 ರಲ್ಲಿ ರೂ.425 ಲಕ್ಷ ಒದಗಿಸಿದ್ದು ಇದರಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿರುವ 4 ವೃತ್ತಿಪರ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ನಿರ್ವಹಣಾ ವೆಚ್ಚ ಹಾಗೂ 2006-07ನೇ ಸಾಲಿಗೆ ಹೊಸದಾಗಿ ಮಂಜೂರು ಮಾಡಲಾಗುವ 50 ನೂತನ ವಿದ್ಯಾರ್ಥಿ ನಿಲಯಗಳ ನಿರ್ವಹಣೆಗೆ ತಗಲುವ ವೆಚ್ಚದ ನಂತರ ಉಳಿತಾಯವಾಗಲಿರುವ ಹಣದಲ್ಲಿ 97 ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯಗಳಲ್ಲಿನ 1000 ವಿದ್ಯಾರ್ಥಿಗಳು ಮತ್ತು 100 ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳಲ್ಲಿನ 1000 ವಿದ್ಯಾರ್ಥಿಗಳ ಸಂಖ್ಯಾಬಲ ಹೆಚ್ಚಳದ ವೆಚ್ಚವನ್ನು ಭರಿಸಲಾಗುವುದೆಂದು ತಿಳಿಸಿ, 2006-07ನೇ ಸಾಲಿನಿಂದ ಸಂಖ್ಯಾಬಲವನ್ನು ಹೆಚ್ಚಿಸಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 204, ಬಿಎಂಎಸ್ 2006, ಬೆಂಗಳೂರು, ದಿನಾಂಕ:26ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ಅಂಶಗಳನ್ನು ಪರಿಶೀಲಿಸಿದೆ. 2006-07ನೇ ಸಾಲಿನಿಂದ ಅನ್ವಯವಾಗುವಂತೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ 97 ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳಲ್ಲಿನ 1000 ವಿದ್ಯಾರ್ಥಿಗಳ ಸಂಖ್ಯಾಬಲವನ್ನು ಅನುಬಂಧ-1 ರಲ್ಲಿ ಮತ್ತು 100 ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳಲ್ಲಿನ 1000 ವಿದ್ಯಾರ್ಥಿಗಳ ಸಂಖ್ಯಾಬಲವನ್ನು ಅನುಬಂದ-2ರಲ್ಲಿ ನಮೂದಿಸಿರುವಂತೆ ಹೆಚ್ಚಿಸಿ ಆದೇಶಿಸಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು ರಾಜ್ಯ ವಲಯದ ಯೋಜನೆಯ ಲೆಕ್ಕಶೀರ್ಷಿಕೆ 2225-03-277-2-53-059 ಇತರೆ ಖರ್ಚಿನಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಸುಶೀಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು.

ಸರ್ಕಾರಿ ಆದೇಶ ಸಂಖ್ಯೆ: ಸ.ಕ.ಇ. 204 ಬಿಎಂಎಸ್ 2006 ದಿನಾಂಕ:26.07.2006ಕ್ಕೆ ಅನುಬಂಧ-1, 2006-07ನೇ ಸಾಲಿನಲ್ಲಿ ವಿದ್ಯಾರ್ಥಿಗಳ ಮಂಜೂರಾತಿ ಸಂಖ್ಯಾಬಲ ಹೆಚ್ಚಿಸಲಾಗಿರುವ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ಜಿಲ್ಲಾವಾರು ವಿವರ.

| ಜಿಲ್ಲೆಯ ಹೆಸರು | ಕ್ರ. ಸಂ. | ಸಂಖ್ಯಾಬಲ ಹೆಚ್ಚಿಸಬೇಕಾಗಿರುವ ಮೆ.ನಂ. ವಿದ್ಯಾರ್ಥಿನಿಲಯ ಕಾರ್ಯನಿರ್ವಹಿಸುತ್ತಿರುವ ಸ್ಥಳ | ತಾಲ್ಲೂಕಿನ ಹೆಸರು | ಬಾಲಕ: ಬಾಲಕಿ | ಹಾಲಿ ಇರುವ ವಿದ್ಯಾರ್ಥಿ ನಿಲಯಗಳ ಮಂಜೂರಾತಿ ಸಂಖ್ಯಾಬಲ | ಹೆಚ್ಚಿಸಲಾಗಿರುವ ಸಂಖ್ಯಾಬಲ |
|---|---|---|---|---|---|---|
| 1 | 2 | 3 | 4 | 5 | 6 | 7 |
| ಬೆಂಗಳೂರು (ನ) ಜಿಲ್ಲೆ | 1. | ಕೆ.ಆರ್. ಪುರಂ | ಬೆಂಗಳೂರು ಪೂರ್ವ | ಬಾಲಕಿ | 50 | 10 |
| | 2. | ಥಣಿಸಂದ್ರ | ಬೆಂಗಳೂರು ಪೂರ್ವ | ಬಾಲಕಿ | 70 | 10 |
| | 3. | ಥಣಿಸಂದ್ರ | ಬೆಂಗಳೂರು ಪೂರ್ವ | ಬಾಲಕಿ | 70 | 10 |
| | 4. | ಯಲಚೇನಹಳ್ಳಿ | ಬೆಂಗಳೂರು ದಕ್ಷಿಣ | ಬಾಲಕ | 70 | 10 |
| | 5. | ಯಲಚೇನಹಳ್ಳಿ | ಬೆಂಗಳೂರು ದಕ್ಷಿಣ | ಬಾಲಕ | 70 | 10 |
| ಬೆಂಗಳೂರು (ಗ್ರಾಂ) ಜಿಲ್ಲೆ | 6. | ರಾಮನಗರ ಟೌನ್ | ರಾಮನಗರ | ಬಾಲಕ | 50 | 20 |
| ಬಳ್ಳಾರಿ ಜಿಲ್ಲೆ | 7. | ಬಳ್ಳಾರಿ ಟೌನ್ | ಬಳ್ಳಾರಿ | ಬಾಲಕ | 100 | 10 |
| | 8. | ಬಳ್ಳಾರಿ ಟೌನ್ | ಬಳ್ಳಾರಿ | ಬಾಲಕಿ | 50 | 10 |
| | 9. | ಬಳ್ಳಾರಿ ಟೌನ್, ವೃತ್ತಿಪರ | ಬಳ್ಳಾರಿ | ಬಾಲಕ | 70 | 10 |
| | 10. | ಬಳ್ಳಾರಿ ಟೌನ್ | ಬಳ್ಳಾರಿ | ಬಾಲಕ | 75 | 10 |
| ಬೆಳಗಾಂ | 11. | ಬೆಳಗಾಂ ಟೌನ್ | ಬೆಳಗಾಂ (ಕಣಬುರ್ಗಿ) | ಬಾಲಕ | 100 | 10 |
| | 12. | ಬೆಳಗಾಂ ಟೌನ್ | ಬೆಳಗಾಂ (ವಡಂಗಾಂ) | ಬಾಲಕಿ | 50 | 10 |
| | 13. | ಮರಡಿ ಮಠ | ಗೋಕಾಕ್ | ಬಾಲಕಿ | 50 | 10 |
| | 14. | ಗೋಕಾಕ್ ಟೌನ್ | ಗೋಕಾಕ್ | ಬಾಲಕಿ | 50 | 10 |
| | 15. | ರಾಮದುರ್ಗ ಟೌನ್ | ರಾಮದುರ್ಗ | ಬಾಲಕ | 50 | 10 |
| | 16. | ರಾಮದುರ್ಗ ಟೌನ್ | ರಾಮದುರ್ಗ | ಬಾಲಕಿ | 50 | 10 |
| | 17. | ಮಜಲಹಟ್ಟಿ | ಚಿಕ್ಕೋಡಿ | ಬಾಲಕ | 50 | 10 |
| | 18. | ನಿಪ್ಪಾಣಿ | ಚಿಕ್ಕೋಡಿ | ಬಾಲಕಿ | 50 | 10 |
| | 19. | ಸಂಕೇಶ್ವರ | ಹುಕ್ಕೇರಿ | ಬಾಲಕ | 50 | 10 |
| | 20. | ರಾಯಬಾಗ್ ಟೌನ್ | ರಾಯಬಾಗ್ | ಬಾಲಕಿ | 50 | 10 |
| | 21. | ಅಥಣಿ ಟೌನ್ | ಅಥಣಿ | ಬಾಲಕಿ | 50 | 10 |
| ಬೀದರ್ | 22. | ಬೀದರ್ ಟೌನ್ | ಬೀದರ್ | ಬಾಲಕಿ | 50 | 10 |
| | 23. | ಬೀದರ್ ಟೌನ್ | ಬೀದರ್ | ಬಾಲಕ | 100 | 10 |
| | 24. | ಬಸವ ಕಲ್ಯಾಣ ಟೌನ್ | ಬಸವ ಕಲ್ಯಾಣ | ಬಾಲಕಿ | 50 | 10 |
| | 25. | ಬಸವ ಕಲ್ಯಾಣ ಟೌನ್ | ಬಸವ ಕಲ್ಯಾಣ | ಬಾಲಕ | 50 | 10 |
| ಬಿಜಾಪುರ | 26. | ಬಿಜಾಪುರ ಟೌನ್ (ವೃತ್ತಿಪರ) | ಬಿಜಾಪುರ | ಬಾಲಕಿ | 50 | 10 |
| | 27. | ಕೂಡ್ಲಗಿ | ಬಸವನ ಬಾಗೇವಾಡಿ | ಬಾಲಕ | 50 | 10 |
| ಬಾಗಲಕೋಟೆ | 28. | ಬಾಗಲಕೋಟೆ ಟೌನ್ | ಬಾಗಲಕೋಟೆ | ಬಾಲಕಿ | 50 | 10 |
| | 29. | ಬಾಗಲಕೋಟೆ ಟೌನ್ | ಬಾಗಲಕೋಟೆ | ಬಾಲಕ | 100 | 10 |
| ಚಿಕ್ಕಮಗಳೂರು | 30. | ಚಿಕ್ಕಮಗಳೂರು ಟೌನ್ (ವೃತ್ತಿಪರ) | ಚಿಕ್ಕಮಗಳೂರು | ಬಾಲಕಿ | 50 | 10 |
| | 31. | ಬೀರೂರು | ಕಡೂರು | ಬಾಲಕ | 110 | 10 |
| | 32. | ಕಡೂರು ಟೌನ್ | ಕಡೂರು | ಬಾಲಕ | 50 | 10 |
| | 33. | ಕಡೂರು ಟೌನ್ | ಕಡೂರು | ಬಾಲಕಿ | 50 | 10 |
| | 34. | ಶೃಂಗೇರಿ | ಶೃಂಗೇರಿ | ಬಾಲಕಿ | 50 | 10 |
| ಚಿತ್ರದುರ್ಗ | 35. | ಚಿತ್ರದುರ್ಗ ಟೌನ್ | ಚಿತ್ರದುರ್ಗ | ಬಾಲಕಿ | 50 | 10 |
| | 36. | ಚಿತ್ರದುರ್ಗ ಟೌನ್ (ವೃತ್ತಿಪರ) | ಚಿತ್ರದುರ್ಗ | ಬಾಲಕ | 50 | 10 |
| ಚಾಮರಾಜನಗರ | 37. | ಚಾಮರಾಜನಗರ ಟೌನ್ | ಚಾಮರಾಜನಗರ | ಬಾಲಕಿ | 50 | 10 |

| 1 | 2 | 3 | 4 | 5 | 6 | 7 |
|---|---|---|---|---|---|---|
| ದಕ್ಷಿಣ ಕನ್ನಡ | 38. | ಮಂಗಳೂರು ಟೌನ್ (ಚಿಲಂಬಿ) | ಮಂಗಳೂರು | ಬಾಲಕಿ | 60 | 10 |
| | 39. | ಮಂಗಳೂರು ಟೌನ್ (ಬಲ್ಮಟ್ಟ) | ಮಂಗಳೂರು | ಬಾಲಕಿ | 50 | 10 |
| | 40. | ಬೆಳ್ತಂಗಡಿ ಟೌನ್ | ಬೆಳ್ತಂಗಡಿ | ಬಾಲಕಿ | 100 | 10 |
| | 41. | ಬೆಳ್ತಂಗಡಿ ಟೌನ್ | ಬೆಳ್ತಂಗಡಿ | ಬಾಲಕ | 50 | 10 |
| | 42. | ವಾಮದಪದವು | ಬಂಟವಾಳ | ಬಾಲಕ | 100 | 10 |
| | 43. | ಸುಳ್ಯ ಟೌನ್ | ಸುಳ್ಯ | ಬಾಲಕಿ | 50 | 10 |
| ಧಾರವಾಡ | 44. | ಧಾರವಾಡ (ವೃತ್ತಿಪರ) | ಧಾರವಾಡ | ಬಾಲಕಿ | 50 | 10 |
| | 45. | ಧಾರವಾಡ (ಸ್ನಾತಕೋತ್ತರ) | ಧಾರವಾಡ | ಬಾಲಕಿ | 50 | 10 |
| | 46. | ಹುಬ್ಬಳ್ಳಿ ಟೌನ್ (ಸಾಯಿನಗರ) | ಹುಬ್ಬಳ್ಳಿ | ಬಾಲಕಿ | 50 | 10 |
| | 47. | ಹುಬ್ಬಳ್ಳಿ ಟೌನ್ (ಈಶ್ವರ ನಗರ) | ಹುಬ್ಬಳ್ಳಿ | ಬಾಲಕ | 50 | 10 |
| ದಾವಣಗೆರೆ | 48. | ದಾವಣಗೆರೆ ಟೌನ್ | ದಾವಣಗೆರೆ | ಬಾಲಕಿ | 75 | 10 |
| | 49. | ದಾವಣಗೆರೆ ಟೌನ್ | ದಾವಣಗೆರೆ | ಬಾಲಕ | 70 | 10 |
| ಗುಲ್ಬರ್ಗಾ | 50. | ಗುಲ್ಬರ್ಗಾ ಟೌನ್ (ಸ್ನಾತಕೋತ್ತರ) | ಗುಲ್ಬರ್ಗಾ | ಬಾಲಕ | 100 | 10 |
| | 51. | ಯಾದಗಿರಿ ಟೌನ್ | ಯಾದಗಿರಿ | ಬಾಲಕ | 50 | 10 |
| | 52. | ಗುರುಮಿಟ್ಕಲ್ | ಯಾದಗಿರಿ | ಬಾಲಕ | 50 | 10 |
| ಗದಗ | 53. | ಗದಗ ಟೌನ್ | ಗದಗ | ಬಾಲಕ | 50 | 10 |
| ಹಾಸನ | 54. | ಹಾಸನ ಟೌನ್ | ಹಾಸನ | ಬಾಲಕಿ | 100 | 10 |
| | 55. | ಹಾಸನ ಟೌನ್ (ವೃತ್ತಿಪರ) | ಹಾಸನ | ಬಾಲಕ | 50 | 10 |
| | 56. | ಅರಸಿಕೆರೆ ಟೌನ್ | ಅರಸಿಕೆರೆ | ಬಾಲಕ | 65 | 10 |
| | 57. | ಚನ್ನರಾಯಪಟ್ಟಣ ಟೌನ್ | ಚನ್ನರಾಯಪಟ್ಟಣ | ಬಾಲಕಿ | 50 | 15 |
| | 58. | ಪಡುವಲ ಹಿಪ್ಪೆ | ಹೊಳೆನರಸಿಪುರ | ಬಾಲಕ | 50 | 20 |
| ಹಾವೇರಿ | 59. | ಅಕ್ಕಿ ಆಲೂರು | ಹಾನಗಲ್ | ಬಾಲಕ | 70 | 10 |
| | 60. | ಅಕ್ಕಿ ಆಲೂರು | ಹಾನಗಲ್ | ಬಾಲಕಿ | 50 | 10 |
| | 61. | ಹಾವೇರಿ ಟೌನ್ | ಹಾವೇರಿ | ಬಾಲಕಿ | 50 | 10 |
| ಕೊಡಗು | 62. | ಮಡಿಕೇರಿ | ಮಡಿಕೇರಿ | ಬಾಲಕಿ | 50 | 10 |
| | 63. | ಗೋಣಿಕೊಪ್ಪ | ವಿರಾಜಪೇಟೆ | ಬಾಲಕ | 50 | 10 |
| ಕೋಲಾರ | 64. | ಕೋಲಾರ | ಕೋಲಾರ | ಬಾಲಕಿ | 70 | 10 |
| | 65. | ಬಾಗೇಪಲ್ಲಿ | ಬಾಗೇಪಲ್ಲಿ | ಬಾಲಕ | 50 | 10 |
| ಕೊಪ್ಪಳ | 66. | ಕೊಪ್ಪಳ | ಕೊಪ್ಪಳ | ಬಾಲಕಿ | 50 | 10 |
| | 67. | ಗಂಗಾವತಿ | ಗಂಗಾವತಿ | ಬಾಲಕಿ | 50 | 10 |
| ಮಂಡ್ಯ | 68. | ಮಂಡ್ಯ, ತೂಬಿನಕೆರೆ (ಸ್ನಾತಕೋತ್ತರ) | ಮಂಡ್ಯ | ಬಾಲಕ | 50 | 10 |
| | 69. | ಮಂಡ್ಯ ಟೌನ್ | ಮಂಡ್ಯ | ಬಾಲಕಿ | 50 | 10 |
| | 70. | ಪಾಂಡವಪುರ | ಪಾಂಡವಪುರ | ಬಾಲಕ | 50 | 10 |
| | 71. | ಕೆ.ಆರ್. ಪೇಟೆ | ಕೆ.ಆರ್. ಪೇಟೆ | ಬಾಲಕ | 50 | 10 |
| | 72. | ನಾಗಮಂಗಲ | ನಾಗಮಂಗಲ | ಬಾಲಕ | 50 | 10 |
| ಮೈಸೂರು | 73. | ಮೈಸೂರು (ಕುವೆಂಪುನಗರ) | ಮೈಸೂರು | ಬಾಲಕಿ | 75 | 10 |
| | 74. | ಮೈಸೂರು (ಕುವೆಂಪುನಗರ) | ಮೈಸೂರು | ಬಾಲಕಿ | 50 | 10 |
| | 75. | ಮೈಸೂರು (ವೃತ್ತಿಪರ) | ಮೈಸೂರು | ಬಾಲಕ | 50 | 10 |
| | 76. | ಮೈಸೂರು ಟೌನ್ (ಸ್ನಾತಕೋತ್ತರ) | ಮೈಸೂರು | ಬಾಲಕಿ | 50 | 10 |
| ರಾಯಚೂರು | 77. | ರಾಯಚೂರು ಟೌನ್ | ರಾಯಚೂರು | ಬಾಲಕಿ | 50 | 10 |
| | 78. | ಲಿಂಗಸುಗೂರು | ಲಿಂಗಸುಗೂರು | ಬಾಲಕಿ | 50 | 10 |

| 1 | 2 | 3 | 4 | 5 | 6 | 7 |
|---|---|---|---|---|---|---|
| ಶಿವಮೊಗ್ಗ | 79. | ಶಿವಮೊಗ್ಗ ಟೌನ್ | ಶಿವಮೊಗ್ಗ | ಬಾಲಕಿ | 120 | 10 |
| | 80. | ಶಿವಮೊಗ್ಗ (ವೃತ್ತಿಪರ) | ಶಿವಮೊಗ್ಗ | ಬಾಲಕಿ | 50 | 10 |
| | 81. | ಶಿವಮೊಗ್ಗ (ವೃತ್ತಿಪರ) | ಶಿವಮೊಗ್ಗ | ಬಾಲಕ | 50 | 10 |
| | 82. | ಹೊಸನಗರ ಟೌನ್ | ಹೊಸನಗರ | ಬಾಲಕ | 50 | 15 |
| | 83. | ಹೊಸನಗರ ಟೌನ್ | ಹೊಸನಗರ | ಬಾಲಕಿ | 70 | 10 |
| | 84. | ಸಾಗರ ಟೌನ್ | ಸಾಗರ | ಬಾಲಕಿ | 95 | 10 |
| | 85. | ಆನಂದಪುರ | ಸಾಗರ | ಬಾಲಕಿ | 50 | 10 |
| | 86. | ತೀರ್ಥಹಳ್ಳಿ ಟೌನ್ | ತೀರ್ಥಹಳ್ಳಿ | ಬಾಲಕಿ | 70 | 10 |
| | 87. | ಶಿಕಾರಿ ಪುರ ಟೌನ್ | ಶಿಕಾರಿಪುರ | ಬಾಲಕಿ | 50 | 10 |
| | 88. | ಸೊರಬ | ಸೊರಬ | ಬಾಲಕ | 140 | 10 |
| | 89. | ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ (ಸ್ನಾತಕೋತ್ತರ) | ಭದ್ರಾವತಿ | ಬಾಲಕ | 100 | 10 |
| ತುಮಕೂರು | 90. | ತುಮಕೂರು ಟೌನ್ | ತುಮಕೂರು | ಬಾಲಕಿ | 75 | 10 |
| | 91. | ತುಮಕೂರು ಟೌನ್ | ತುಮಕೂರು | ಬಾಲಕ | 50 | 10 |
| | 92. | ಪಾವಗಡ ಟೌನ್ | ಪಾವಗಡ | ಬಾಲಕ | 50 | 10 |
| | 93. | ಶಿರಾ ಟೌನ್ | ಶಿರಾ | ಬಾಲಕ | 95 | 10 |
| ಉತ್ತರ ಕನ್ನಡ | 94. | ಕಾರವಾರ ಟೌನ್ | ಕಾರವಾರ | ಬಾಲಕಿ | 50 | 10 |
| | 95. | ಕುಮಟಾ ಟೌನ್ | ಕುಮಟಾ | ಬಾಲಕಿ | 50 | 10 |
| ಉಡುಪಿ | 96 | ಉಡುಪಿ (ಕುಂಜಿಬೆಟ್ಟು) | ಉಡುಪಿ | ಬಾಲಕಿ | 50 | 10 |
| | 97. | ಕುಂದಾಪುರ ಟೌನ್ | ಕುಂದಾಪುರ | ಬಾಲಕ | 50 | 10 |
| | | | | | **ಒಟ್ಟು** | **1000** |

**ಎಲ್. ಸುಶೀಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು.

ಸರ್ಕಾರಿ ಆದೇಶ ಸಂಖ್ಯೆ: ಸ.ಕ.ಇ. 204 ಬಿಎಂಎಸ್ 2006 ದಿನಾಂಕ:26.07.2006ಕ್ಕೆ ಅನುಬಂಧ-2, 2006-07ನೇ ಸಾಲಿನಲ್ಲಿ ವಿದ್ಯಾರ್ಥಿಗಳ ಮಂಜೂರಾತಿ ಸಂಖ್ಯಾಬಲ ಹೆಚ್ಚಿಸಲಾಗಿರುವ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ಜಿಲ್ಲಾವಾರು ವಿವರ.

| ಜಿಲ್ಲೆಯ ಹೆಸರು | ಕ್ರ. ಸಂ. | ಸಂಖ್ಯಾಬಲ ಹೆಚ್ಚಿಸಬೇಕಾಗಿರುವ ಮೆ.ನಂ. ವಿದ್ಯಾರ್ಥಿನಿಲಯ ಕಾರ್ಯನಿರ್ವಹಿಸುತ್ತಿರುವ ಸ್ಥಳ | ತಾಲ್ಲೂಕಿನ ಹೆಸರು | ಬಾಲಕ: ಬಾಲಕಿ | ಹಾಲಿ ಇರುವ ವಿದ್ಯಾರ್ಥಿ ನಿಲಯಗಳ ಮಂಜೂರಾತಿ ಸಂಖ್ಯಾಬಲ | ಹೆಚ್ಚಿಸಲಾಗಿರುವ ಸಂಖ್ಯಾಬಲ |
|---|---|---|---|---|---|---|
| 1 | 2 | 3 | 4 | 5 | 6 | 7 |
| ಬೆಂಗಳೂರು ನಗರ | 1. | ಕೆ.ಆರ್. ಪುರಂ | ಬೆಂಗಳೂರು ಪೂರ್ವ | ಬಾಲಕಿ | 50 | 10 |
| ಬೆಂಗಳೂರು ಗ್ರಾಂ | 2. | ರಾಮನಗರ ಟೌನ್ | ರಾಮನಗರ ಟೌನ್ | ಬಾಲಕ | 65 | 10 |
| ಬಳ್ಳಾರಿ | 3. | ಕುರುಗೋಡು | ಬಳ್ಳಾರಿ | ಬಾಲಕ | 50 | 10 |
| | 4. | ಬಳ್ಳಾರಿ (ಕಂಟೋನ್‌ಮೆಂಟ್) | ಬಳ್ಳಾರಿ | ಬಾಲಕ | 50 | 10 |
| | 5. | ಬಳ್ಳಾರಿ | ಬಳ್ಳಾರಿ | ಬಾಲಕಿ | 50 | 10 |
| | 6. | ಶಿಡಗಿನಮೊಳ | ಬಳ್ಳಾರಿ | ಬಾಲಕ | 50 | 10 |
| | 7. | ಹಡಗಲಿ | ಹಡಗಲಿ | ಬಾಲಕಿ | 50 | 10 |
| | 8. | ಚೋರನೂರು | ಸಂಡೂರು | ಬಾಲಕ | 50 | 10 |
| | 9. | ಸಂಡೂರ್ ಟೌನ್ | ಸಂಡೂರು ಟೌನ್ | ಬಾಲಕ | 75 | 10 |
| | 10. | ಬೊಮ್ಮಘಟ್ಟ | ಸಂಡೂರು | ಬಾಲಕ | 50 | 10 |
| ಬೆಳಗಾಂ | 11. | ಮಜಲಟ್ಟಿ | ಚಿಕ್ಕೋಡಿ | ಬಾಲಕ | 75 | 10 |
| | 12. | ಗೋಕಾಕ್ | ಗೋಕಾಕ್ | ಬಾಲಕ | 60 | 10 |
| | 13. | ಮಮದಾಪುರ | ಗೋಕಾಕ್ | ಬಾಲಕ | 75 | 10 |
| | 14. | ಬೆಟಗೇರಿ | ಗೋಕಾಕ್ | ಬಾಲಕ | 50 | 10 |
| | 15. | ಕುಲಗೋಡ್ | ಗೋಕಾಕ್ | ಬಾಲಕ | 50 | 10 |

| 1 | 2 | 3 | 4 | 5 | 6 | 7 |
|---|---|---|---|---|---|---|
| | 16. | ಗೋಕಾಕ್ (ಡಿ.ಟಿ) ಟೌನ್ | ಗೋಕಾಕ್ | ಬಾಲಕ | 50 | 10 |
| | 17. | ಅಂಕಲಗಿ (ಡಿ.ಟಿ.) | ಗೋಕಾಕ | ಬಾಲಕ | 60 | 10 |
| | 18. | ಕೌಜಲಗಿ | ಗೋಕಾಕ | ಬಾಲಕ | 50 | 10 |
| | 19. | ಖನಗಾಂವ | ಗೋಕಾಕ | ಬಾಲಕ | 50 | 10 |
| | 20. | ಕೊಳವಿ | ಗೋಕಾಕ | ಬಾಲಕ | 50 | 10 |
| | 21. | ಕುರಣಿ | ಹುಕ್ಕೇರಿ | ಬಾಲಕ | 50 | 10 |
| ಬೀದರ್ | 22. | ಚಿಂತಕಿಹಳ್ಳಿ | ಔರಾದ್ | ಬಾಲಕಿ | 50 | 10 |
| | 23. | ರಾಜೇಶ್ವರ | ಬಸವಕಲ್ಯಾಣ | ಬಾಲಕ | 75 | 10 |
| | 24. | ಬಸವಕಲ್ಯಾಣ ಟೌನ್ | ಬಸವಕಲ್ಯಾಣ | ಬಾಲಕ | 50 | 10 |
| | 25. | ಮಂಠಾಳ | ಬಸವಕಲ್ಯಾಣ | ಬಾಲಕ | 50 | 10 |
| | 26. | ಮುಡಬಿ (ಓ.ಬಿ.ಸಿ.) | ಬಸವಕಲ್ಯಾಣ | ಬಾಲಕ | 67 | 10 |
| | 27. | ನಾರಾಯಣಪುರ | ಬಸವಕಲ್ಯಾಣ | ಬಾಲಕ | 50 | 10 |
| ಬಿಜಾಪುರ | 28. | ಲೋಗಾಂವ | ಬಿಜಾಪುರ | ಬಾಲಕ | 50 | 10 |
| | 29. | ಕೂಡ್ಲಗಿ | ಬ.ಬಾಗೇವಾಡಿ | ಬಾಲಕ | 50 | 10 |
| ಬಾಗಲಕೋಟೆ | 30. | ಬಾಗಲಕೋಟೆ | ಬಾಗಲಕೋಟೆ | ಬಾಲಕ | 55 | 10 |
| ಚಿಕ್ಕಮಗಳೂರು | 31. | ಚಿಕ್ಕಮಗಳೂರುಟೌನ್ | ಚಿಕ್ಕಮಗಳೂರು | ಬಾಲಕಿ | 50 | 10 |
| | 32. | ಬಾಳೆಹೊನ್ನೂರು | ಎನ್.ಆರ್. ಪುರ | ಬಾಲಕಿ | 55 | 10 |
| | 33. | ಕಡೂರು ಟೌನ್ | ಕಡೂರು | ಬಾಲಕ | 75 | 10 |
| | 34. | ಕಡೂರು ಟೌನ್ | ಕಡೂರು | ಬಾಲಕಿ | 50 | 10 |
| | 35. | ನಾಗೇನಹಳ್ಳಿ | ಕಡೂರು | ಬಾಲಕ | 50 | 10 |
| | 36. | ಬಾಸೂರು | ಕಡೂರು | ಬಾಲಕ | 50 | 10 |
| | 37. | ಚೌಳಹಿರಿಯೂರು | ಕಡೂರು | ಬಾಲಕ | 50 | 10 |
| | 38. | ಗುಬ್ಬಿಹಳ್ಳಿ | ಕಡೂರು | ಬಾಲಕ | 50 | 10 |
| | 39. | ಬೀರೂರು | ಕಡೂರು | ಬಾಲಕಿ | 50 | 10 |
| | 40. | ಜಯಪುರ | ಕೊಪ್ಪ | ಬಾಲಕ | 50 | 10 |
| | 41. | ಕೊಪ್ಪ ಟೌನ್ | ಕೊಪ್ಪ | ಬಾಲಕಿ | 50 | 10 |
| | 42. | ಮೂಡಿಗೆರೆ | ಮೂಡಿಗೆರೆ | ಬಾಲಕಿ | 70 | 10 |
| | 43. | ಕಳಸ | ಮೂಡಿಗೆರೆ | ಬಾಲಕಿ | 70 | 10 |
| ಚಿತ್ರದುರ್ಗ | 44. | ಹಿರಿಯೂರು | ಹಿರಿಯೂರು | ಬಾಲಕಿ | 50 | 10 |
| ಚಾಮರಾಜನಗರ | 45. | ಚಾಮರಾಜನಗರ ಟೌನ್ | ಚಾಮರಾಜನಗರ | ಬಾಲಕಿ | 50 | 10 |
| ದಕ್ಷಿಣ ಕನ್ನಡ | 46. | ಮಂಗಳೂರು ಬಿಜೈ | ಮಂಗಳೂರು | ಬಾಲಕಿ | 50 | 10 |
| | 47. | ಸೂಳ್ಯ | ಸೂಳ್ಯ | ಬಾಲಕಿ | 70 | 10 |
| | 48. | ಗುತ್ತಿಗಾರ | ಸೂಳ್ಯ | ಬಾಲಕಿ | 50 | 10 |
| | 49. | ಪುತ್ತಿಲ | ಬೆಳ್ತಂಗಡಿ | ಬಾಲಕಿ | 50 | 10 |
| | 50. | ವಾಮದಪದವು | ಬಂಟ್ವಾಳ | ಬಾಲಕ | 50 | 10 |
| | 51. | ವಿಟ್ಲ | ಬಂಟ್ವಾಳ | ಬಾಲಕಿ | 50 | 10 |
| ಧಾರವಾಡ | 52. | ಕಲಘಟಗಿ ಟೌನ್ | ಕಲಘಟಗಿ | ಬಾಲಕ | 50 | 10 |
| | 53. | ತಬಕದ ಹೊನ್ನಳ್ಳಿ | ಕಲಘಟಗಿ | ಬಾಲಕ | 25 | 10 |
| ದಾವಣಗೆರೆ | 54. | ಅಸಗೋಡು | ಜಗಳೂರು | ಬಾಲಕ | 25 | 10 |
| | 55. | ಚನ್ನಗಿರಿ | ಚನ್ನಗಿರಿ | ಬಾಲಕ | 40 | 10 |
| | 56. | ಕೆರಬಿಳಿಚಿ | ಚನ್ನಗಿರಿ | ಬಾಲಕ | 45 | 10 |
| | 57. | ದಾವಣಗೆರೆ ಟೌನ್ | ದಾವಣಗೆರೆ | ಬಾಲಕಿ | 95 | 10 |
| | 58. | ಹೊನ್ನಾಳ್ಳಿ ಟೌನ್ | ಹೊನ್ನಾಳ್ಳಿ | ಬಾಲಿ | 40 | 10 |
| ಗುಲ್ಬರ್ಗಾ | 59. | ಗುರುಮಿಟ್ಕಲ್ | ಯಾದಗೀರ್ | ಬಾಲಕ | 50 | 10 |
| | 60. | ಯಾದಗಿರಿ | ಯಾದಗೀರ್ | ಬಾಲಕ | 50 | 10 |
| | 61. | ಅರಳಗುಂಡಗಿ | ಜೇವರ್ಗಿ | ಬಾಲಕ | 55 | 10 |
| ಗದಗ | 62. | ಗದಗ ಟೌನ್ | ಗದಗ | ಬಾಲಕಿ | 50 | 10 |

| 1 | 2 | 3 | 4 | 5 | 6 | 7 |
|---|---|---|---|---|---|---|
| ಹಾಸನ | 63. | ಹಾಸನ ಟೌನ್ | ಹಾಸನ | ಬಾಲಕಿ | 50 | 10 |
| | 64. | ಅರಸೀಕೆರೆ ಟೌನ್ | ಅರಸೀಕೆರೆ | ಬಾಲಕ | 60 | 10 |
| | 65. | ಜೆ.ಸಿ. ಪುರ (ಓಬಿಸಿ) | ಅರಸೀಕೆರೆ | ಬಾಲಕ | 50 | 10 |
| | 66. | ಅರಸೀಕೆರೆ ಟೌನ್ | ಅರಸೀಕೆರೆ | ಬಾಲಕಿ | 50 | 10 |
| | 67. | ಚನ್ನರಾಯಪಟ್ಟಣ | ಚನ್ನರಾಯಪಟ್ಟಣ | ಬಾಲಕಿ | 50 | 10 |
| ಹಾವೇರಿ | 68. | ಕಾಟೇನಹಳ್ಳಿ | ಹಾವೇರಿ | ಬಾಲಕ | 50 | 10 |
| | 69. | ಹಾನಗಲ್ ಟೌನ್ | ಹಾನಗಲ್ | ಬಾಲಕ | 50 | 10 |
| | 70. | ತಿಲವಳ್ಳಿ | ಹಾನಗಲ್ | ಬಾಲಕ | 50 | 10 |
| | 71. | ಬೊಮ್ಮನಹಳ್ಳಿ | ಹಾನಗಲ್ | ಬಾಲಕ | 50 | 10 |
| | 72. | ಹಾನಗಲ್ ಟೌನ್ | ಹಾನಗಲ್ | ಬಾಲಕ | 50 | 10 |
| ಕೊಡಗು | 73. | ಪೊನ್ನಂಪೇಟೆ | ವಿರಾಜಪೇಟೆ | ಬಾಲಕಿ | 50 | 10 |
| ಕೋಲಾರ | 74. | ಕೋಲಾರ ಟೌನ್ | ಕೋಲಾರ | ಬಾಲಕಿ | 50 | 10 |
| ಕೊಪ್ಪಳ | 75. | ಕುಷ್ಟಗಿ ಟೌನ್ | ಕುಷ್ಟಗಿ | ಬಾಲಕ | 50 | 10 |
| | 76. | ಕೊರಡಕೇರಾ | ಕುಷ್ಟಗಿ | ಬಾಲಕ | 50 | 10 |
| ಮಂಡ್ಯ | 77. | ಬೆಳ್ಳೂರು | ನಾಗಮಂಗಲ | ಬಾಲಕಿ | 25 | 10 |
| ಮೈಸೂರು | 78. | ಮೈಸೂರು ಟೌನ್ | ಮೈಸೂರು | ಬಾಲಕಿ | 50 | 10 |
| | 79. | ಹೆಮ್ಮರಗಾಲ | ನಂಜನಗೂಡು | ಬಾಲಕ | 50 | 10 |
| ರಾಯಚೂರು | 80. | ಲಿಂಗಸೂಗುರು ಟೌನ್ | ಲಿಂಗಸೂಗೂರು | ಬಾಲಕ | 50 | 10 |
| | 81. | ಲಿಂಗಸೂಗೂರು ಟೌನ್ | ಲಿಂಗಸೂಗೂರು | ಬಾಲಕಿ | 50 | 10 |
| | 82. | ಸಂತೆಕಲ್ಲೂರು | ಲಿಂಗಸೂಗೂರು | ಬಾಲಕ | 50 | 15 |
| | 83. | ಮದಕಿನಾಳ | ಲಿಂಗಸೂಗೂರು | ಬಾಲಕ | 50 | 10 |
| ಶಿವಮೊಗ್ಗ | 84. | ಶಿವಮೊಗ್ಗ ಟೌನ್ | ಶಿವಮೊಗ್ಗ | ಬಾಲಕಿ | 75 | 10 |
| | 85. | ಆಯನೂರು | ಶಿವಮೊಗ್ಗ | ಬಾಲಕಿ | 50 | 10 |
| | 86. | ಸಿರಿಗೆರೆ | ಶಿವಮೊಗ್ಗ | ಬಾಲಕಿ | 50 | 10 |
| | 87. | ಹೊಸನಗರ | ಹೊಸನಗರ | ಬಾಲಕ | 55 | 10 |
| | 88. | ಹೊಸನಗರ | ಹೊಸನಗರ | ಬಾಲಕಿ | 50 | 10 |
| | 89. | ಶಿಕಾರಿಪುರ ಟೌನ್ | ಶಿಕಾರಿಪುರ | ಬಾಲಕಿ | 50 | 10 |
| | 90. | ಸಾಗರಟೌನ್ | ಸಾಗರ | ಬಾಲಕಿ | 65 | 10 |
| | 91. | ತೀರ್ಥಹಳ್ಳಿ ಟೌನ್ | ತೀರ್ಥಹಳ್ಳಿ | ಬಾಲಕಿ | 50 | 10 |
| | 92. | ಸೊರಬ ಟೌನ್ | ಸೊರಬ | ಬಾಲಕಿ | 50 | 10 |
| ತುಮಕೂರು | 93. | ತುಮಕೂರು ಟೌನ್ | ತುಮಕೂರು | ಬಾಲಕಿ | 50 | 10 |
| ಉತ್ತರ ಕನ್ನಡ | 94. | ಕಾರವಾರ | ಕಾರವಾರ | ಬಾಲಕಿ | 50 | 10 |
| | 95. | ಕುಮಟಾ | ಕುಮಟಾ | ಬಾಲಕ | 40 | 10 |
| | 96 | ಸಿರ್ಸಿ | ಸಿರ್ಸಿ | ಬಾಲಕಿ | 70 | 10 |
| | 97. | ಜೋಯಿಡಾ ಟೌನ್ | ಜೋಯಿಡಾ | ಬಾಲಕಿ | 50 | 10 |
| | 98. | ಅಂಕೋಲಾ ಟೌನ್ | ಅಂಕೋಲಾ | ಬಾಲಕಿ | 50 | 10 |
| ಉಡುಪಿ | 99. | ಪಟ್ಲ | ಉಡುಪಿ | ಬಾಲಕಿ | 50 | 10 |
| | 100. | ಕಾರ್ಕಳ | ಕಾರ್ಕಳ | ಬಾಲಕಿ | 50 | 10 |
| | | | | | **ಒಟ್ಟು** | **1000** |

**ಎಲ್. ಸುಶೀಲಮ್ಮ**

ಪಿ.ಆರ್. 1171

ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಎಸ್.ಆರ್. ಸಣ್ಣೂರ್‌ಕರ್, ನಿವೃತ್ತ ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ಹಾಗೂ ಶ್ರೀ ಪಿ.ವಿ. ಮನೋಹರನ್, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:** 1. ಕಾನೂನು ಮಾಪನಶಾಸ್ತ್ರ ನಿಯಂತ್ರಕರ ಪತ್ರಸಂಖ್ಯೆ: ಕಾಮಾ೩/ ಸಿಬ್ಬಂದಿ/2/ ಸಿಆರ್-123/ 03-04, ದಿನಾಂಕ:07.10.2003.

2. ಸರ್ಕಾರದ ನೋಟೀಸ್ ಸಂಖ್ಯೆ: ಆನಾಸ 95 ಕಾಮಾಸೇ 2003, ದಿನಾಂಕ:30.06.2004.

3. ಶ್ರೀ ಎಸ್.ಆರ್. ಸಣ್ಣೂರ್‌ಕರ್, ನಿವೃತ್ತ ಕಾನೂನು ಮಾಪನಶಾಸ್ತ್ರ ಉಪನಿಯಂತ್ರಕರ ಇವರ ಲಿಖಿತ ಉತ್ತರ ದಿನಾಂಕ:30.07.2004.
4. ಶ್ರೀ ಪಿ.ವಿ. ಮನೋಹರನ್, ಕಾನೂನು ಮಾಪನಶಾಸ್ತ್ರ ಉಪನಿಯಂತ್ರಕರು, ಬೆಂಗಳೂರು ಇವರ ಲಿಖಿತ ಉತ್ತರ ದಿನಾಂಕ:18.08.2004.

**ಪ್ರಸ್ತಾವನೆ:**

ಕಾನೂನು ಮಾಪನಶಾಸ್ತ್ರ ನಿಯಂತ್ರಕರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಎನ್. ವಿಶ್ವನಾಥ್‌ರವರು ಪ್ರಥಮ ದರ್ಜೆ ಸಹಾಯಕರ ಹುದ್ದೆಯಿಂದ ದ್ವಿತೀಯ ದರ್ಜೆ ಸಹಾಯಕರಾಗಿ ಹಿಂಬಡ್ತಿ ಹೊಂದಿ ನಂತರ ದೈಹಿಕ ಸಹಾಯಕರಾಗಿ ವೃಂದ ಬದಲಾವಣೆ ಹೊಂದಿದ್ದು, ಇವರು ಕಾನೂನಿನನ್ವಯ ಆಯ್ಕೆ ಕಾಲಿಕ ವೇತನ ಬಡ್ತಿ, ಸ್ಥಗಿತ ವೇತನ ಬಡ್ತಿಯ, ವೇತನ ಶ್ರೇಣಿಗಳಿಗೆ ಅರ್ಹರಿಲ್ಲದಿದ್ದರೂ ಸಹ ಇವರಿಗೆ ಶ್ರೀ ಎಸ್.ಆರ್. ಸಣ್ಣೂರ್‌ಕರ್, ಕಾನೂನು ಮಾಪನಶಾಸ್ತ್ರ ಉಪನಿಯಂತ್ರಕರು, ಬೆಂಗಳೂರು ಜಿಲ್ಲೆರವರು ಆಯ್ಕೆ ಕಾಲಿಕ ವೇತನ ಶ್ರೇಣಿ ಹಾಗೂ ಸ್ಥಗಿತ ವೇತನ ಬಡ್ತಿಗಳನ್ನು ನಿಯಮಬಾಹಿರವಾಗಿ ಮಂಜೂರು ಮಾಡಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ, ಅದೇ ರೀತಿ ಶ್ರೀ ಪಿ.ವಿ. ಮನೋಹರನ್, ಕಾನೂನು ಮಾಪನಶಾಸ್ತ್ರ ಉಪನಿಯಂತ್ರಕರು, ಬೆಂಗಳೂರು ಇವರು ಕೂಡ ಶ್ರೀ ಎನ್. ವಿಶ್ವನಾಥ್ ಇವರಿಗೆ ಸ್ವಯಂಚಾಲಿತ ವೇತನ ಶ್ರೇಣಿಯನ್ನು ನಿಯಮಬಾಹಿರವಾಗಿ ಮಂಜೂರು ಮಾಡಿರುವುದರಿಂದ, ಇವರುಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ನೋಟಿಸ್‌ರನ್ವಯ ಶ್ರೀ ಎಸ್.ಆರ್. ಸಣ್ಣೂರ್‌ಕರ್, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಹಾಗೂ ಶ್ರೀ ಪಿ.ವಿ. ಮನೋಹರನ್, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರುಗಳಿಗೆ ತಿಳುವಳಿಕೆ ಪತ್ರಗಳನ್ನು ಜಾರಿ ಮಾಡಿ ಅವರಿಂದ ಸಮಜಾಯಿಷಿ ನೀಡಲು ಕೋರಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಶ್ರೀ ಎಸ್.ಆರ್. ಸಣ್ಣೂರ್‌ಕರ್‌ರವರ ಹೇಳಿಕೆಯಲ್ಲಿ ಅವರ ಮೇಲಿನ ಆರೋಪವನ್ನು ನಿರಾಕರಿಸಿ ಇದು ಆಡಳಿತಾತ್ಮಕ ದೋಷದಿಂದ ಉಂಟಾದ ಪರಿಸ್ಥಿತಿಯಿಂದ ಈ ಬಡ್ತಿಗಳನ್ನು ಮಂಜೂರು ಮಾಡಲಾಗಿದೆ ಎಂದೂ, ಇದರಲ್ಲಿ ಅವರದ್ದೇನೂ ತಪ್ಪಿಲ್ಲವೆಂದು ಈ ಬಗ್ಗೆ ಈಗಾಗಲೇ ಸೂಕ್ತ ಕ್ರಮ ತೆಗೆದುಕೊಂಡಿರುವುದರಿಂದ, ಹಾಗೂ ಇದರಿಂದ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂದೂ, ತಾವು ದುರ್ನಡತೆ ಎಸಗಿರುವುದಿಲ್ಲವೆಂದು ತಿಳಿಸಿ, ಈ ಆರೋಪದಿಂದ ಮುಕ್ತರನ್ನಾಗಿಸಬೇಕೆಂದು ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಶ್ರೀ ಪಿ.ವಿ. ಮನೋಹರನ್, ಕಾನೂನು ಮಾಪನಶಾಸ್ತ್ರ ಉಪನಿಯಂತ್ರಕರವರು ತಮ್ಮ ಲಿಖಿತ ಹೇಳಿಕೆ ನೀಡಿ, ಇದಕ್ಕೆ ತಾವು ಹೊಣೆಗಾರರಾಗಿಲ್ಲವೆಂದು, ಇದನ್ನು ಅವರ ಮೇಲಾಧಿಕಾರಿಗಳಾದ ಕಾನೂನು ಮಾಪನಶಾಸ್ತ್ರ ನಿಯಂತ್ರಕರ ಆದೇಶದಂತೆ ಇವರಿಗೆ ಸ್ವಯಂಚಾಲಿತ ವೇತನ ಬಡ್ತಿಯನ್ನು ಮಂಜೂರು ಮಾಡಿರುವುದಾಗಿ ತಿಳಿಸಿ ಇಲಾಖಾ ಮುಖ್ಯಸ್ಥರ ಹಾಗೂ ನೇಮಕಾತಿ ಪ್ರಾಧಿಕಾರಿಯವರ ಆದೇಶವನ್ನು ನಿಷ್ಠೆಯಿಂದ ಪಾಲನೆ ಮಾಡಿರುವುದಾಗಿ ತಿಳಿಸಿರುತ್ತಾರೆ. ಈ ಬಗ್ಗೆ ಈಗಾಗಲೇ ಎಸ್. ವಿಶ್ವನಾಥ್‌ರವರಿಂದ ಈ ಹೆಚ್ಚುವರಿಯಾಗಿ ಮಾಡಿರುವ ಆದೇಶಗಳಲ್ಲಿನ ಹಣವನ್ನು ವಸೂಲಿ ಮಾಡಿ ಸರ್ಕಾರಕ್ಕೆ ಜಮಾ ಮಾಡಿರುವುದರಿಂದ, ಸರ್ಕಾರಕ್ಕೆ ಆರ್ಥಿಕ ನಷ್ಟವಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಆದ್ದರಿಂದ ಇವರ ಮೇಲೆ ಮಾಡಲಾದ ಆಪಾದನೆಗಳನ್ನು ಕೈಬಿಡಬೇಕೆಂದು ಕೋರಿರುತ್ತಾರೆ.

ಇವರುಗಳ ಹೇಳಿಕೆಯನ್ನು ಒಪ್ಪಿಕೊಳ್ಳದೆ ಇವರುಗಳಿಂದ ಸರ್ಕಾರಕ್ಕೆ ನಷ್ಟವಾಗಿರುವುದನ್ನು ಮನಗಂಡು ಹಾಗೂ ಕಾನೂನುಬಾಹಿರವಾಗಿ ಕ್ರಮ ಜರುಗಿಸಿ ಹೆಚ್ಚುವರಿ ವೇತನ ಬಡ್ತಿಗಳನ್ನು ನೀಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಈ ಪ್ರಕರಣದ ಬಗ್ಗೆ ಸತ್ಯಾಸತ್ಯತೆಗಳನ್ನು ತಿಳಿಯಲು ಇವರಿಬ್ಬರ ಮೇಲೆ ಇಲಾಖಾ ವಿಚಾರಣೆ ನಡೆಸಲು ಉದ್ದೇಶಿಸಲಾಗಿದೆ.

ಈ ಪ್ರಕರಣದಲ್ಲಿ ಶ್ರೀ ಎಸ್.ಆರ್. ಸಣ್ಣೂರ್‌ಕರ್‌ರವರು ದಿನಾಂಕ:30.06.2004ರಂದು ನಿವೃತ್ತರಾಗಿರುವುದರಿಂದ ಅವರ ಮೇಲೆ ಕರ್ನಾಟಕ ನಾಗರೀಕ ಸೇವೆಗಳ ನಿಯಮಾವಳಿಗಳ ನಿಯಮ 214ರಡಿ ಶಿಸ್ತುಕ್ರಮ ಜರುಗಿಸಲು ಹಾಗೂ ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಈ ಶಿಸ್ತು ಕ್ರಮದಲ್ಲಿ ಅನುಸರಿಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 95 ಕಾಮಾಸೇ 2003, ಬೆಂಗಳೂರು, ದಿನಾಂಕ:4ನೇ ಆಗಸ್ಟ್, 2006**

ಶ್ರೀ ಎಸ್.ಆರ್. ಸಣ್ಣೂರ್‌ಕರ್, ನಿವೃತ್ತ ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರ ಮೇಲಿನ ಆಪಾದನೆಗಳ ಬಗ್ಗೆ ಕೆ.ಸಿ.ಎಸ್.ಆರ್. ನಿಯಮ 214ರ ಮೇರೆಗೆ 1957ರ ನಿಯಮ 11ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಿ ಹಾಗೂ ಶ್ರೀ ಪಿ.ವಿ.ಮನೋಹರನ್, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ಇವರ ಮೇಲಿನ ಆಪಾದನೆಗಳ ಬಗ್ಗೆ ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ 1957ರ ನಿಯಮ 11ರನ್ವಯ ಇಲಾಖಾ ವಿಚಾರಣೆ ನಡೆಸಿ ವರದಿ ನೀಡಲು ಶ್ರೀ ಕೆ. ಈಶ್ವರಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಜ್ಯುಡಿಷಿಯಲ್ ಲೇಔಟ್, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿಯೂ ಮತ್ತು ಉಪನಿಯಮ 5ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಿಸ್ತು ಪ್ರಾಧಿಕಾರಿಯ ಪರವಾಗಿ ವಿಷಯವನ್ನು ಮಂಡಿಸಲು ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ನಗರ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ. ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5,000/- (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆ ಹಾಗೂ ದಿನಾಂಕ:04.03.2002ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001ರನ್ವಯ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ವಿಚಾರಣಾಧಿಕಾರಿಯವರು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಯವರು ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಗಿಸಿ ಸೂಕ್ತ ದಾಖಲಾತಿಗಳೊಡನೆ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 1172

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ವಿವಿಧ ಇಲಾಖೆಗಳ ಸರ್ಕಾರಿ ನೌಕರರಿಗೆ ಆಡಳಿತ ಕನ್ನಡ ಕಾರ್ಯಶಿಬಿರ ನಡೆಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 60 ಸ್ವೀಮರ 2006 ದಿನಾಂಕ:07.04.2006.

2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಅವರ ಪತ್ರ ಸಂಖ್ಯೆ: ಕಸನಿ/ 13/ ಕ/ 2006-07 ದಿನಾಂಕ:13.06.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:07.04.2006ರ ಸರ್ಕಾರಿ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಸರ್ಕಾರಿ ನೌಕರರ ಆಡಳಿತ ಕನ್ನಡ ಕಾರ್ಯಶಿಬಿರ ನಡೆಸಲು 2006-07ನೇ ಸಾಲಿಗೆ 1,50,000/- ರೂ.ಗಳನ್ನು ನಿಗದಿಪಡಿಸಲಾಗಿದೆ. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ:13.06.2006ರ ಪತ್ರದಲ್ಲಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ 3 ವಲಯಗಳಲ್ಲಿ ಶಿಬಿರ ನಿರ್ದೇಶಕರ ಕಾರ್ಯಶಿಬಿರವನ್ನು ನಡೆಸಲು ವಲಯ ಒಂದಕ್ಕೆ 50,000/- ರೂ.ಗಳಂತೆ 3 ವಲಯಗಳಿಗೆ ಒಟ್ಟು 1,50,000/- ರೂ.ಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

### ಆದೇಶ ಸಂಖ್ಯೆ: ಸಂಕಇ 64 ಕಸನಿ 2006, ಬೆಂಗಳೂರು, ದಿನಾಂಕ:5ನೇ ಆಗಸ್ಟ್, 2006

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ 2006-07ನೇ ಸಾಲಿನಲ್ಲಿ ಸರ್ಕಾರಿ ನೌಕರರ ಆಡಳಿತ ಕನ್ನಡ ಕಾರ್ಯಶಿಬಿರ ನಿರ್ದೇಶಕರ ಕಾರ್ಯಶಿಬಿರವನ್ನು ವಲಯ ಒಂದಕ್ಕೆ 50,000/- ರೂ.ಗಳಂತೆ ಒಟ್ಟು 3 ವಲಯಗಳಿಗೆ 1,50,000/- ರೂ.ಗಳ ವೆಚ್ಚದಲ್ಲಿ ನಡೆಸಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಸಂಬಂಧದ ವೆಚ್ಚವನ್ನು 2006-07ನೇ ಸಾಲಿನ ಲೆಕ್ಕಶೀರ್ಷಿಕೆ 2205-00-001-0-01-059 (ಯೋಜನೆ) ರಡಿಯಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: 602 ಐಎಫ್ (ಬಿಎ) 2006 ದಿನಾಂಕ:26.07.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1173

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು
ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ವಿಷಯ:** ಶ್ರೀ ಮಹಮದ್ ಸುಲೇಮಾನ್, ವಾಹನ ಚಾಲಕ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಇವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ವಾಹನ ಚಾಲಕರಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸುವ ಕುರಿತು.

**ಓದಲಾಗಿದೆ:** ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರ ಪತ್ರ ಸಂಖ್ಯೆ: ಕಅಪ್ರಾ/ ಕಾ/ 11/ 2002 ದಿನಾಂಕ:16.06.2006.

**ಪ್ರಸ್ತಾವನೆ:**

ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರು ಮೇಲೆ ಓದಲಾದ ದಿನಾಂಕ16.06.2006ರ ಪತ್ರದಲ್ಲಿ ಬೆಂಗಳೂರು ನಗರ ಸಾರಿಗೆ ಸಂಸ್ಥೆಯಲ್ಲಿ ಚಾಲಕರಾಗಿ ಕಾರ್ಯನಿರ್ವಹಿಸುತ್ತಿರುವ (ಬಿಲ್ಲೆ ಸಂಖ್ಯೆ: 10837 ಘಟಕ 2) ಶ್ರೀ ಮಹಮದ್ ಸುಲೇಮಾನ್ ಅವರನ್ನು ಪ್ರಾಧಿಕಾರದ ಕಛೇರಿಯಲ್ಲಿ ಖಾಲಿ ಇರುವ ವಾಹನ ಚಾಲಕರ ಹುದ್ದೆಯಲ್ಲಿ ತೆಗೆದುಕೊಳ್ಳಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

### ಸರ್ಕಾರಿ ಆದೇಶ ಸಂಖ್ಯೆ: ಸಂಕಇ 14 ಕೆಡಿಎಲ್ 2006, ಬೆಂಗಳೂರು, ದಿನಾಂಕ:4ನೇ ಆಗಸ್ಟ್, 2006

ಶ್ರೀ ಮಹಮದ್ ಸುಲೇಮಾನ್, ವಾಹನ ಚಾಲಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ (ಬಿಲ್ಲೆ ಸಂಖ್ಯೆ 10837 ಘಟಕ 2) ಇವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ ಅವರ ಕಛೇರಿಯಲ್ಲಿ ಖಾಲಿ ಇರುವ ಚಾಲಕರ ಹುದ್ದೆಗೆ ಈ ಆದೇಶದೊಡನೆ ಲಗತ್ತಿಸಿರುವ ಷರತ್ತು ಮತ್ತು ನಿಬಂಧನೆಗೆ ಒಳಪಟ್ಟಂತೆ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಆರ್ಥಿಕ ಇಲಾಖೆಯ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1176 ವೆಚ್ಚ-5/2006 ದಿನಾಂಕ:19.07.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1174

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು
ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ವಿಷಯ:** ಕೊಪ್ಪಳ ಜಿಲ್ಲೆ, ಯಲಬುರ್ಗಾ ಪಟ್ಟಣದಲ್ಲಿ ಕಿತ್ತೂರು ಚೆನ್ನಮ್ಮ ಪ್ರತಿಮೆ ನಿರ್ಮಾಣಕ್ಕೆ ರೂ.5.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರಸಂಖ್ಯೆ: ಕಸನಿ/ ಪ್ರತಿಮೆ/ 27/ 2003-04, ದಿನಾಂಕ:03.06.2006.

**ಪ್ರಸ್ತಾವನೆ:**

ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ:03.06.2006ರ ಪತ್ರದಲ್ಲಿ ಕೊಪ್ಪಳ ಜಿಲ್ಲೆ ಯಲಬುರ್ಗಾ ಪಟ್ಟಣದ ಕಿತ್ತೂರು ರಾಣಿ ಚೆನ್ನಮ್ಮನ ವೃತ್ತದಲ್ಲಿ ಕಿತ್ತೂರು ಚೆನ್ನಮ್ಮ ಪ್ರತಿಮೆಯನ್ನು ಸ್ಥಾಪಿಸುವ ಸಲುವಾಗಿ ಕೊಪ್ಪಳ ಜಿಲ್ಲಾಧಿಕಾರಿಗಳ

ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಸಮಿತಿ ಸಭೆ ನಡೆದು 9.00 ಲಕ್ಷ ರೂಪಾಯಿಗಳ ವೆಚ್ಚವನ್ನು ಅಂದಾಜಿಸಿದ್ದು ಅದರಲ್ಲಿ 5.00 ಲಕ್ಷ ರೂಪಾಯಿಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 55 ಕಸನಿ 2006, ಬೆಂಗಳೂರು, ದಿನಾಂಕ:4ನೇ ಆಗಸ್ಟ್, 2006**

ಕೊಪ್ಪಳ ಜಿಲ್ಲೆಯ ಯಲಬುರ್ಗಾ ಪಟ್ಟಣದ ಕಿತ್ತೂರು ಚೆನ್ನಮ್ಮ ವೃತ್ತದಲ್ಲಿ ವೀರರಾಣಿ ಕಿತ್ತೂರು ಚೆನ್ನಮ್ಮ ಪ್ರತಿಮೆ ನಿರ್ಮಾಣದ ಸಂಬಂಧ 5.00 ಲಕ್ಷ ರೂಪಾಯಿಗಳ ಅನುದಾನವನ್ನು ಸರ್ಕಾರದಿಂದ ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರಿಗೆ ಬಿಡುಗಡೆ ಮಾಡಲಾಗಿದೆ. ಇದಕ್ಕೆ ತಗಲುವ ವೆಚ್ಚವನ್ನು 2006-07ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 4202-04-800-1-02-139 (ಯೋಜನೇತರ) ಪ್ರತಿಮೆ, ಸ್ಮಾರಕ ಹಾಗೂ ವೀರಸೌಧ ನಿರ್ಮಾಣ ಅಡಿಯಲ್ಲಿ ಭರಿಸತಕ್ಕದ್ದು.

ಪ್ರಸ್ತಾವನೆಯೊಡನೆ ಕಳುಹಿಸಲ್ಪಟ್ಟ ಅಂದಾಜು ಪಟ್ಟಿ ಹಾಗೂ ನೀಲಿ ನಕಾಶೆಗೆ ಅನುಮೋದನೆ ನೀಡಲಾಗಿದೆ.

ಕನ್ನಡ ಮತ್ತು ಸಂಸ್ಕರತಿ ಇಲಾಖೆ, ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಇಡಿ 570 ಐಎಫ್(ಬಿಎ) 2006 ದಿನಾಂಕ:12.07.2006 ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1175

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು
ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 44 ಮುನೊಸೊ 2004, ದಿನಾಂಕ:27.04.2005.

2. ಆಡಳಿತಾಧಿಕಾರಿ, ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಇವರ ಪತ್ರ ಸಂಖ್ಯೆ: ಸಂಕೀರ್ಣ/ 2005-06/ 359, ದಿನಾಂಕ:13.06.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಈ ಸಂಸ್ಥೆಗೆ ತಹಶೀಲ್ದಾರ್, ಆಳಂದ ತಾಲ್ಲೂಕು ಇವರನ್ನು ಸಂಸ್ಥೆಯ ಹಿತದೃಷ್ಟಿಯಿಂದ ಹಾಗೂ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದ್ದು, ಸದರಿ ಆಡಳಿತಾಧಿಕಾರಿಯ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದೆ. ಓದಲಾದ (2)ರಲ್ಲಿ ಆಡಳಿತಾಧಿಕಾರಿಗಳು ಪ್ರಸ್ತಾವನೆ ಸಲ್ಲಿಸಿ ಕಾರ್ಯ ಒತ್ತಡದಿಂದ ಸಂಸ್ಥೆಗೆ ಚುನಾವಣೆ ನಡೆಸುವುದು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಅವಧಿಯನ್ನು ವಿಸ್ತರಿಸಲು ಕೋರಿದ್ದಾರೆ. ಆಡಳಿತಾಧಿಕಾರಿಯ ಅವಧಿಯು ದಿನಾಂಕ:26.04.2006ಕ್ಕೆ ಮುಕ್ತಾಯಗೊಂಡಿದ್ದು, ಆಡಳಿತಾಧಿಕಾರಿಯ ಪ್ರಸ್ತಾವನೆಯನ್ನು ಪರಿಶೀಲಿಸಿ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 52 ಮುನೊಸೊ 2006, ಬೆಂಗಳೂರು, ದಿನಾಂಕ:1ನೇ ಆಗಸ್ಟ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-27 -ಎ ಪ್ರಕಾರ ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ:27.04.2006 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ಅವಧಿಯೊಳಗೆ ಶ್ರೀ ಶಿವಲಿಂಗೇಶ್ವರ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ತಡಕಲ್, ಈ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 1176

ಪೀಠಾಧಿಕಾರಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ದಕ್ಷಿಣ ಕನ್ನಡ ಕೂಟ ಬ್ರಾಹ್ಮಣರ ಮಿತ್ರ ಮಂಡಳಿ, ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:** 1. ಜಿಲ್ಲಾ ನೋಂದಣಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: 175/ 63-64, ದಿನಾಂಕ:16.06.2006.

2. ರಿಟ್ ಅಪೀಲ್ ಸಂಖ್ಯೆ: 709/ 2006 ರಲ್ಲಿ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ:30.052006 ರಂದು.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ವರದಿ ಸಲ್ಲಿಸುತ್ತಾ, ದಕ್ಷಿಣ ಕನ್ನಡ ಕೂಟ ಬ್ರಾಹ್ಮಣರ ಮಿತ್ರ ಮಂಡಳಿ, ಬುಲ್ ಟೆಂಪಲ್ ರಸ್ತೆ, ಬೆಂಗಳೂರು-04, ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಬೇಕೆಂದು ಉಚ್ಚ ನ್ಯಾಯಾಲಯವು ಆದೇಶ ಮಾಡಿದೆ. ಆದ್ದರಿಂದ ಸದರಿ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಬೇಕೆಂದು ಕೋರಿದ್ದಾರೆ. ಓದಲಾದ (2)ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಈ ಕೆಳಗಿನಂತೆ ಆದೇಶಿಸಿದೆ.

"The term of the (Dakshina Kannada Koota Brahmanara Mithra Mandali) governing Council/ Executive committee expired on 31.03.2005. There is no provision in the Karnataka Societies Registration Act, 1960 and the Rules framed thereunder or in the byelaws of the Society enabling the Governing Council/ Executive Committee to continue in office after the expiry of its term. To meet such situations, Section 27-A has been incorporated in the Karnataka Societies Registration Act, 1960 providing for appointment of Administrator. Hence we direct the Government of Karnataka to invoke the power under Section 27-A of the Karnataka Socieites Registration Act, 1960 and to pass appropriate orders in order to avoid the administrative stalemate in the Society."

ಮಾನ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ಸದರಿ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 7 ಮುನೊಸೊ 2006, ಬೆಂಗಳೂರು, ದಿನಾಂಕ:12ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಕೂಟ ಬ್ರಾಹ್ಮಣರ ಮಿತ್ರ ಮಂಡಳಿ (ರಿ), ನಂ.12, ಬುಲ್‌ಟೆಂಪಲ್ ರಸ್ತೆ, ಬೆಂಗಳೂರು-04, ಈ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಲು ಹಾಗೂ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸಲು ಸಾರ್ವಜನಿಕರ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಆಡಳಿತಾಧಿಕಾರಿಯನ್ನಾಗಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ದಕ್ಷಿಣ (1) ಬೆಂಗಳೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೊ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 1177

**ವಿಷಯ:** ಬಸವಕಲ್ಯಾಣ ಮತ್ತು ಅದರ ಸುತ್ತಮುತ್ತಲಿನ ಸ್ಥಳಗಳಲ್ಲಿನ ಶರಣ ಸ್ಮಾರಕಗಳನ್ನು ಸಂರಕ್ಷಿಸಿ ಅಭಿವೃದ್ಧಿ ಪಡಿಸುವುದು ಹಾಗೂ ಬಸವಕಲ್ಯಾಣವನ್ನು ಅಂತರಾಷ್ಟ್ರೀಯ ಮಟ್ಟದ ಪ್ರವಾಸಿ ಕೇಂದ್ರವನ್ನಾಗಿ ಅಭಿವೃದ್ಧಿಪಡಿಸುವ ಬಗ್ಗೆ- ಸಲಹಾ ಸಮಿತಿ ರಚನೆ.

**ಓದಲಾಗಿದೆ:** ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿನಾಂಕ:25.06.2006 ರಂದು ನಡೆದ ಮಂಡಳಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಬಸವಕಲ್ಯಾಣ ಮತ್ತು ಅದರ ಸುತ್ತಮುತ್ತಲಿನ ಸ್ಥಳಗಳಲ್ಲಿರುವ ಶರಣ ಸ್ಮಾರಕಗಳನ್ನು ಸಂರಕ್ಷಿಸಿ ಅಭಿವೃದ್ಧಿ ಪಡಿಸಲು ಹಾಗೂ ಬಸವಕಲ್ಯಾಣವನ್ನು ಅಂತರರಾಷ್ಟ್ರೀಯ ಮಟ್ಟದ ಪ್ರವಾಸಿ ಕೇಂದ್ರವನ್ನಾಗಿ ಅಭಿವೃದ್ಧಿ ಪಡಿಸಲು ಕರ್ನಾಟಕ ಸರ್ಕಾರವು ಬಸವಕಲ್ಯಾಣ ಅಭಿವೃದ್ಧಿ ಮಂಡಳಿ ಕಾಯಿದೆಯನ್ನು ಜಾರಿಗೆ ತಂದಿದೆ. ಇದಕ್ಕಾಗಿ ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯನ್ನು ರಚಿಸಿದೆ. ಈ ಮಂಡಳಿಯು ಬಸವಕಲ್ಯಾಣದಲ್ಲಿ ಕೈಗೊಳ್ಳಲಿರುವ ಅಭಿವೃದ್ಧಿ ಕಾರ್ಯಕ್ರಮಗಳು ಆ ಸ್ಥಳದ ಐತಿಹಾಸಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಹಿನ್ನೆಲೆಗೆ ಸರಿಹೊಂದುವಂತಿರಬೇಕು ಹಾಗೂ ಅಂತರರಾಷ್ಟ್ರೀಯ ಮಟ್ಟದ ಗುಣಮಟ್ಟವನ್ನು ಕಾಯ್ದುಕೊಳ್ಳುವಂತೆ ಇರಬೇಕು ಎನ್ನುವ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಅಲ್ಲಿಯ ಕಾರ್ಯಕ್ರಮಗಳನ್ನು ರೂಪಿಸುವ ಸದುದ್ದೇಶದಿಂದ, ಸದರಿ ಮಂಡಳಿಗೆ ಕಾಲಕಾಲಕ್ಕೆ ಸೂಕ್ತ ಮಾರ್ಗದರ್ಶನ, ಸಲಹೆ ಹಾಗೂ ತಜ್ಞ ಅಭಿಪ್ರಾಯಗಳನ್ನು ಒದಗಿಸಲು ಒಂದು ಸಲಹಾ ಸಮಿತಿಯನ್ನು ನೇಮಿಸಿಕೊಳ್ಳಲು, ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿನಾಂಕ:25.06.2006ರಂದು ನಡೆದ ಮಂಡಳಿಯ ಸಭೆಯಲ್ಲಿ ತೀರ್ಮಾನಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 147 ಆರ್‌ಇಹೆಚ್ 2004, ಬೆಂಗಳೂರು, ದಿನಾಂಕ:27ನೇ ಜುಲೈ, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರವು ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯು ಬಸವಕಲ್ಯಾಣ ಮತ್ತು ಅದರ ಸುತ್ತ ಮುತ್ತಲಿನ ಸ್ಥಳಗಳಲ್ಲಿನ ಶರಣ ಸ್ಮಾರಕಗಳನ್ನು ಸಂರಕ್ಷಿಸಿ ಅಭಿವೃದ್ಧಿ ಪಡಿಸುವುದು ಹಾಗೂ ಬಸವ ಕಲ್ಯಾಣವನ್ನು ಅಂತರರಾಷ್ಟ್ರೀಯ ಮಟ್ಟದ ಪ್ರವಾಸಿ ಕೇಂದ್ರವನ್ನಾಗಿ ಅಭಿವೃದ್ಧಿಪಡಿಸುವ ಬಗ್ಗೆ ಕೈಗೊಳ್ಳುವ ಎಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸೂಕ್ತ ಮಾರ್ಗದರ್ಶನ ಸಲಹೆ ಮತ್ತು ತಜ್ಞ ಅಭಿಪ್ರಾಯಗಳನ್ನು ನೀಡಲು ಈ ಕೆಳಕಂಡ ಸದಸ್ಯರುಗಳನ್ನು ಒಳಗೊಂಡಂತೆ ಸಲಹಾ ಸಮಿತಿಯನ್ನು ರಚಿಸಿದೆ.

1. ಡಾ: ಪಾಟೀಲ್ ಪುಟ್ಟಪ್ಪ, ಸುಪ್ರಸಿದ್ಧ, ಪತ್ರಕರ್ತರು ಮತ್ತು ಬರಹಗಾರರು.
2. ಡಾ: ಎಸ್. ಶೆಟ್ಟರ್, ಇತಿಹಾಸದ ಪ್ರಾಧ್ಯಾಪಕರು, ಭಾರತೀಯ ಉನ್ನತ ಅಧ್ಯಯನಗಳ ಸಂಸ್ಥೆ, ಬೆಂಗಳೂರು.
3. ಡಾ: ಎ. ಸುಂದರ್, ಪ್ರಾಚ್ಯವಸ್ತು ನಿರ್ದೇಶನಾಲಯದ ನಿವೃತ್ತ ನಿರ್ದೇಶಕರು.
4. ಶ್ರೀ ವೆಂಕಟೇಶಯ್ಯ, ಅಧೀಕ್ಷಕ ಪುರಾತತ್ವ ಶಾಸ್ತ್ರಜ್ಞರು, ಭಾರತೀಯ ಪ್ರಾಚ್ಯವಸ್ತು ಸರ್ವೇಕ್ಷಣಾ ಇಲಾಖೆ, ಧಾರವಾಡ.
5. ಡಾ: ಎಂ.ಎಂ. ಕಲ್ಬುರ್ಗಿ, ವಿಶ್ರಾಂತ ಉಪಕುಲಪತಿಗಳು, ಹಂಪಿ ವಿಶ್ವವಿದ್ಯಾಲಯ.
6. ಡಾ: ಹೆಚ್. ಚಂದ್ರಶೇಖರ್, ನಿವೃತ್ತ ಭೂಗರ್ಭಶಾಸ್ತ್ರಜ್ಞರು.
7. ಡಾ: ಎಸ್.ಬಿ. ಮುದ್ದಪ್ಪ, ಕರ್ನಾಟಕ ಸರ್ಕಾರದ ನಿವೃತ್ತ ಮುಖ್ಯಕಾರ್ಯದರ್ಶಿಗಳು.

8. ಡಾ: ಎಂ.ಎನ್. ಜವರಯ್ಯ, ಜಾನಪದ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾಲಯ.
9. ಡಾ: ಗೀತಾಂಜಲಿ ರಾವ್, ಪುರಾತತ್ವ ಶಾಸ್ತ್ರಜ್ಞರು ಹಾಗೂ ಪ್ರಾಧ್ಯಾಪಕರು, ಭೂಮರೆಡ್ಡಿ ಇಂಜಿನಿಯರಿಂಗ್ ಕಾಲೇಜ್, ಹುಬ್ಬಳ್ಳಿ.
10. ಶ್ರೀ ಅಶೋಕ್, ಚಲನಚಿತ್ರ ನಟರು, ಬೆಂಗಳೂರು (ಜಗಜ್ಯೋತಿ ಬಸವೇಶ್ವರ ಚಿತ್ರ ನಟರು)
11. ಶ್ರೀ ಶ್ರೀನಿವಾಸಮೂರ್ತಿ, ಚಲನಚಿತ್ರ ನಟ ಹಾಗೂ ಅಣ್ಣ ಬಸವಣ್ಣ ಧಾರವಾಹಿಯ ನಿರ್ಮಾಪಕರು, ಬೆಂಗಳೂರು.
12. ಶ್ರೀ ಗೊ.ರು. ಚನ್ನಬಸಪ್ಪ, ಅಧ್ಯಕ್ಷರು, ಶರಣ ಸಾಹಿತ್ಯ ಪರಿಷತ್.

ಆಯುಕ್ತರು, ಬಸವಕಲ್ಯಾಣ ಅಭಿವೃದ್ಧಿ ಮಂಡಳಿ, ಬಸವಕಲ್ಯಾಣ ಇವರು ಈ ಸಲಹಾ ಸಮಿತಿಯ ಸದಸ್ಯ ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸುವರು.

ಸಮಿತಿಯು ಸಭೆ ಸೇರಿದಾಗ ಹಾಜರಿರುವ ಸದಸ್ಯರಲ್ಲಿ ಹಿರಿಯರಾದ ಒಬ್ಬರನ್ನು ಆಯಾ ಸಭೆಗೆ ಅಧ್ಯಕ್ಷರನ್ನಾಗಿ ಮಾಡಿ ಕಾರ್ಯಕಲಾಪಗಳನ್ನು ನಡೆಸುವುದು.

ಸಮಿತಿಯು ಅವಶ್ಯ ಬಿದ್ದಾಗ ಬೆಂಗಳೂರು, ಬಸವಕಲ್ಯಾಣ ಅಥವಾ ರಾಜ್ಯದ ಇನ್ನಾವುದೇ ಸೂಕ್ತ ಸ್ಥಳದಲ್ಲಿ ಸಭೆಯನ್ನು ನಡೆಸುವುದು. ಈ ಸಮಿತಿಯಲ್ಲಿ ಒಮ್ಮತದಿಂದ ಸೂಚಿಸಿದ ಅಥವಾ ಅವರಲ್ಲಿ ಬಹುಮತ ಸದಸ್ಯರು ಒಪ್ಪಿದ ಸಲಹೆಗಳನ್ನು ಮಂಡಳಿಯು ಕಾರ್ಯಾಚರಣೆಯಲ್ಲಿ ತರಲು ಪರಿಶೀಲಿಸಬಹುದಾಗಿದೆ. ಒಮ್ಮತವಿಲ್ಲದ ಅಭಿಪ್ರಾಯಗಳನ್ನು ಸರ್ಕಾರಕ್ಕೆ ಕಳುಹಿಸಿ ಸರ್ಕಾರದ ನಿರ್ದೇಶನದಂತೆ ಮುಂದಿನ ಕ್ರಮ ಜರುಗಿಸಬಹುದಾಗಿದೆ.

ಈ ಸಲಹಾ ಸಮಿತಿಗೆ ಹಾಜರಾಗುವ ಮೇಲೆ ತಿಳಿಸಿದ ಸದಸ್ಯರುಗಳು ಹಾಗೂ ತದನಂತರದಲ್ಲಿ ನಾಮಕರಣಗೊಳ್ಳುವ ಸದಸ್ಯರು ಜಾರಿಯಲ್ಲಿರುವ ಸರ್ಕಾರದ ನಿಯಮಗಳಂತೆ ಪ್ರವಾಸಭತ್ಯೆ, ದಿನಭತ್ಯೆ ಮತ್ತು ಉಪವೇಶನ ಶುಲ್ಕಗಳನ್ನು ಪಡೆಯಲು ಅರ್ಹರಿರುತ್ತಾರೆ. ಆಯುಕ್ತರು ಬಸವಕಲ್ಯಾಣ ಅಭಿವೃದ್ಧಿ ಮಂಡಳಿ ಇವರು ಈ ವೆಚ್ಚವನ್ನು ಮಂಡಳಿಯ ನಿಧಿಯಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ಭೂಸ್ವಾ-2 ಮತ್ತು ಪುನರ್ವಸತಿ)

ಪಿ.ಆರ್. 1178

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ಸಕ್ಕರೆ ಸಂಸ್ಥೆಗೆ 2006-07ನೇ ಸಾಲಿನ ಯೋಜನಾ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ: ಡಿಎಸ್‌ಕೆ/ ಇಎಸ್‌ಟಿ/ 17/ 2003-04, ದಿನಾಂಕ:07.04.2006.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆಯು ಹೊಂದಿರುವ ಬೆಳಗಾಂ ಜಿಲ್ಲೆಯ 4 ವಿವಿಧ ಭಾಗಗಳಲ್ಲಿನ 97 ಎಕರೆ ಭೂಮಿಯಲ್ಲಿ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು ಹಾಗೂ ಮಂಡ್ಯ ಜಿಲ್ಲೆಯ ಸಾತನೂರು ಗ್ರಾಮದಲ್ಲಿ 30 ಎಕರೆ ಭೂಮಿಯನ್ನು ಸ್ವಾಧೀನಪಡಿಸಿಕೊಂಡು ಸಂಸ್ಥೆಯ 2ನೇ ಕೇಂದ್ರವನ್ನು ಸ್ಥಾಪಿಸಲು ಉದ್ದೇಶಿಸಿರುವುದಾಗಿ ಹಾಗೂ ಸಕ್ಕರೆ ಕಾರ್ಖಾನೆಯವರಿಗೆ ಮತ್ತು ಕಬ್ಬು ಬೆಳೆಗಾರರಿಗೆ ಪ್ರಾತ್ಯಕ್ಷತೆ ಮತ್ತು ತರಬೇತಿ ನೀಡಲಾಗುವ ದೃಷ್ಟಿಯಿಂದ ಈ ಕೇಂದ್ರದಲ್ಲಿ ಪ್ರಯೋಗ ಶಾಲೆಗಳನ್ನು ನಿರ್ಮಿಸಿ ಅಭಿವೃದ್ಧಿ ಪಡಿಸುವ ಗುರಿಯನ್ನು ಹಮ್ಮಿಕ್ರೊಂಡಿರುವುದಾಗಿ ತಿಳಿಸುತ್ತಾ ಕರ್ನಾಟಕ ಸಕ್ಕರೆ ಸಂಸ್ಥೆಯ ಅಗತ್ಯ ಮೂಲಸೌಕರ್ಯ ಸೌಲಭ್ಯಗಳಿಗಾಗಿ 2006-07ನೇ ಸಾಲಿನ ಪ್ಲಾನ್ ಸ್ಕೀಂನಲ್ಲಿ ಸರ್ಕಾರವು ಒದಗಿಸಿರುವ ರೂ.100.00 ಲಕ್ಷಗಳ ಅನುದಾನವನ್ನು ಮಂಜೂರು ಮಾಡಿ ಬಿಡುಗಡೆ ಮಾಡಲು ಕೋರಿರುತ್ತಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 87 ಎಸ್‌ಜಿಎಫ್ 2006, ದಿನಾಂಕ:27ನೇ ಜುಲೈ, 2006**

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಕ್ಕರೆ ಸಂಸ್ಥೆಯ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂ ಇದಕ್ಕೆ 2005-06ನೇ ಸಾಲಿನಲ್ಲಿ ಮಂಜೂರು ಮಾಡಿ ಬಿಡುಗಡೆ ಮಾಡಿರುವ ಹಣದಲ್ಲಿ ಬಾಕಿ ಉಳಿದಿರುವ ರೂ.32.04 ಲಕ್ಷಗಳನ್ನು ಈಗಾಗಲೇ ಹಮ್ಮಿಕ್ರೊಂಡಿರುವ ಯೋಜನಾ ಕಾರ್ಯಕ್ರಮಗಳು ಪೂರ್ಣಗೊಳಿಸಿದ ನಂತರ ವರದಿಯನ್ನು ಸಲ್ಲಿಸುವ ಷರತ್ತಿಗೆ ಒಳಪಟ್ಟು 2006-07ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2852-08-201-0-01 (ಉಪ ಶೀರ್ಷಿಕೆ-106) (ಯೋಜನೆ) ಅಡಿಯಲ್ಲಿ ಒದಗಿಸಲಾಗಿರುವ ರೂ.100.00 ಲಕ್ಷಗಳಲ್ಲಿ ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 03 ಬಿಪಿಇ 2006 ದಿನಾಂಕ:31.03.2006ರನ್ವಯ ಆಯವ್ಯಯವನ್ನು 4 ತಿಂಗಳಿಗೆ ಅನುಮೋದನೆ ನೀಡಲಾಗಿರುವುದರಿಂದ 1/3 ಭಾಗದಷ್ಟು ಅಂದರೆ ರೂ.30.00 ಲಕ್ಷಗಳನ್ನು (ಮೂವತ್ತು ಲಕ್ಷ ರೂಪಾಯಿಗಳು ಮಾತ್ರ) ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂ ಇದಕ್ಕೆ ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಹಣ ಸಂದಾಯದ ರಸೀದಿ ಮೇಲೆ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಮೇಲು ರುಜು ಪಡೆದು ಸದರಿ ಹಣವನ್ನು ಖಜಾನೆಯಿಂದ ಡ್ರಾ ಮಾಡುವ ಅಧಿಕಾರವನ್ನು ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರಿಗೆ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ-1-ಟಿಎಫ್‌ಪಿ 2003 ದಿನಾಂಕ:12.06.2003ರಲ್ಲಿ ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1179

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಶ್ರೀ ರಂಗಸ್ವಾಮಿ ಆರ್, ವಕೀಲರು, ಹಿರಿಯೂರು, ಇವರನ್ನು ಹಿರಿಯೂರು ಕಂದಾಯ ತಾಲ್ಲೂಕಿನ ನೋಟರಿಯಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಲಾ 103 ಎಲ್‌ಸಿಎಲ್ 04 ದಿ:16.5.2005.
2. ಸರ್ಕಾರಿ ಪತ್ರ ಸಂಖ್ಯೆ:ಲಾ 103 ಎಲ್‌ಸಿಎಲ್ 04 ದಿನಾಂಕ:27.5.2005.
3. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಇವರ ಪತ್ರ DJC. NO. 6496/2005 ದಿನಾಂಕ: 1.8.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:16.5.2005ರ ಆದೇಶದಲ್ಲಿ ಶ್ರೀ ಕೆ.ಆರ್. ಪ್ರೇಮನಾಥ್, ನೋಟರಿ, ಹಿರಿಯೂರು ಇವರ ರಾಜೀನಾಮೆಯನ್ನು ಅಂಗೀಕರಿಸಲಾಗಿದೆ. ಸದರಿ ಹುದ್ದೆಯ ನೇಮಕಾತಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ:27.5.2005ರ ಪತ್ರದಲ್ಲಿ ನೋಟರಿ ನಿಯಮಾನುಸಾರ ಅರ್ಜಿಗಳನ್ನು ಆಹ್ವಾನಿಸಿ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಇವರನ್ನು ಕೋರಲಾಗಿತ್ತು. ಅದರನ್ವಯ ಮೇಲೆ(3) ರಲ್ಲಿ ಓದಲಾದ ದಿನಾಂಕ:1.8.2005ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಇವರು ಅರ್ಜಿಗಳೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ. ಲಾ 103 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 20ನೇ ಮೇ 2006**

ನೋಟರಿ ನಿಯಮಗಳ (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ(1952) ಹಾಗೂ ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ರಂಗಸ್ವಾಮಿ ಆರ್, ವಕೀಲರು, ಬಿ.ಜೆ.ಆರ್. ಎಕ್ಸ್‌ಟೆನ್ಷನ್, ಹಿರಿಯೂರು, ಚಿತ್ರದುರ್ಗ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹಿರಿಯೂರು ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070- ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯಪರಿಪಾಲನೆ -501-0-ಇತರೆ ಸ್ವೀಕೃತಿಗಳು-06 ಇತರ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗಧಿ ಪಡಿಸಲಾದ ರೂ. 1000(ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್. ಶಕುಂತಲ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 847

**ವಿಷಯ:** ಶ್ರೀ ಎಲ್. ಪುಟ್ಟರಾಜು, ವಕೀಲರು, ಬೆಂಗಳೂರು(ನಗರ) ಇವರನ್ನು ಬೆಂಗಳೂರು(ನಗರ) ಕಂದಾಯ ತಾಲ್ಲೂಕಿನ ನೋಟರಿಯಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಲಾ 173 ಎಲ್‌ಸಿಎಲ್ 05 ದಿ:1.7.2005.
2. ಪ್ರಧಾನ ನಗರ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು (ನಗರ) ಇವರ ಪತ್ರ ದಿನಾಂಕ:16.1.2006,

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:1.7.2005ರ ಸರ್ಕಾರಿ ಪತ್ರದಲ್ಲಿ ಶ್ರೀ ಬಿ. ವಿಶ್ವೇಶ್ವರ ರಾವ್, ನೋಟರಿ, ಬೆಂಗಳೂರು(ನಗರ) ಇವರ ನಿಧನದಿಂದ ತೆರವಾದ ಹುದ್ದೆಯ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಪ್ರಧಾನ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು (ನಗರ) ಇವರನ್ನು ಕೋರಲಾಗಿತ್ತು.

ಅದರಂತೆ ಮೇಲೆ(2)ರಲ್ಲಿ ಓದಲಾದ ದಿನಾಂಕ:16.1.2006ರ ಪತ್ರದಲ್ಲಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು(ನಗರ) ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 173 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 18ನೇ ಮೇ 2006**

ನೋಟರಿ ನಿಯಮಗಳ (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ(1952) ಹಾಗೂ ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಎಲ್. ಪುಟ್ಟರಾಜು, ವಕೀಲರು, ನಂ.3/1 ಅರುಣ ಮ್ಯಾನ್ಷನ್ 2ನೇ ಮುಖ್ಯ ರಸ್ತೆ ಬ್ಯಾಟರಾಯನಪುರ ನ್ಯೂಟಿಂಬರ್ ಯಾರ್ಡ್‌ಲೇಔಟ್, 58ನೇ ಕೊನೆ ಬಸ್‌ಸ್ಟಾಪ್ ಹತ್ತಿರ, ಮೈಸೂರ್ ರೋಡ್, ಬೆಂಗಳೂರು (ನಗರ) ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬೆಂಗಳೂರು (ನಗರ) ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗಧಿ ಪಡಿಸಲಾದ ರೂ. 1000(ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲ**

ಪಿ.ಆರ್. 849

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ವಿಷಯ:** ಚಿಕ್ಕೋಡಿ ತಾಲ್ಲೂಕಿನ ನೋಟರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಲಾ 209 ಎಲ್‌ಸಿಎಲ್ 2005 ದಿ:24.12.2005.
2. ಸರ್ಕಾರಿ ಪತ್ರ ಸಂಖ್ಯೆ ಲಾ 179 ಎಲ್‌ಸಿಎಲ್ 2005 ದಿನಾಂಕ 28.12.2005.
3. ಸರ್ಕಾರಿ ಪತ್ರ ಸಂಖ್ಯೆ:ಲಾ 209 ಎಲ್‌ಸಿಎಲ್ 2005 ದಿನಾಂಕ:31.12.2005.
4. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಇವರ ಪತ್ರ ಸಂಖ್ಯೆ:2691/2006 ದಿನಾಂಕ:8.3.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೆಳಗಾಂ ಜಿಲ್ಲೆ ಚಿಕ್ಕೋಡಿ ಕಂದಾಯ ತಾಲ್ಲೂಕಿಗೆ ಎರಡು ನೋಟರಿ ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಲಾಗಿತ್ತು ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಪತ್ರದಲ್ಲಿ ಶ್ರೀ ಜೆ.ಎಸ್. ಅಮ್ಮಣ್ಣವರ್ ನೋಟರಿ, ಚಿಕ್ಕೋಡಿ ಇವರ ನಿಧನದಿಂದ ತೆರವಾದ ಹುದ್ದೆ ಹಾಗೂ ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಹೊಸದಾಗಿ ಸೃಜಿಸಲಾದ ಎರಡು ಹುದ್ದೆಗಳಿಗೆ ಸೂಕ್ತ ವಕೀಲರನ್ನು ನೇಮಕಾತಿ ಮಾಡುವ ಸಲುವಾಗಿ ನಿಯಮಗಳನ್ವಯ ಕ್ರಮಕೈಗೊಂಡು ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ಇವರನ್ನು ಕೋರಲಾಗಿತ್ತು.

ಆ ಮೇರೆಗೆ ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 122 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 30ನೇ ಮೇ 2006**

ನೋಟರಿ ನಿಯಮಗಳ (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ(1952) ಹಾಗೂ ಉಲ್ಲೇಖಿತ ನಿಯಮಗಳ ರೀತ್ಯ ಈ ಕೆಳಗಿನವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಚಿಕ್ಕೋಡಿ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಶ್ರೀ.ಎಸ್. ಜಿ. ಹಿರೇಮಠ್, ವಕೀಲರು, ನಂ. 636, ಹುಡ್ಡರ್‌ಗಲ್ಲಿ ಚಿಕ್ಕೋಡಿ

ಶ್ರೀ ಬಸಪ್ಪ ರಾಮಪ್ಪ ಕಮಡೆ, ವಕೀಲರು, ಕೆ.ಸಿ. ರಸ್ತೆ, ಚಿಕ್ಕೋಡಿ

ಶ್ರೀ ಮಹದೇವ ಈಶ್ವರಪ್ಪ ಬಂಡವಾಡೆ, ವಕೀಲರು, ಬೆನ್ನಿಹಳ್ಳಿ, ಚಿಕ್ಕೋಡಿ, ಬೆಳಗಾಂ ಜಿಲ್ಲೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗಧಿಪಡಿಸಲಾದ ರೂ. 1000(ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲ**

ಪಿ.ಆರ್. 850

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ವಿಷಯ:** ಶ್ರೀಯುತರುಗಳಾದ ಹುಬ್ಲಿ ವೀರಬಸಪ್ಪ, ವಕೀಲರು, ಗದಗ್ ಮತ್ತು ಹರಿಂದ್ರ ವಾಸುದೇವ ಭಟ್, ವಕೀಲರು ಗದಗ್ ಇವರಗಳನ್ನು ಗದಗ್ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಲಾ 209 ಎಲ್‌ಸಿಎಲ್ 2005 ದಿ:24.12.2005.
2. ಸರ್ಕಾರಿ ಪತ್ರ ಸಂಖ್ಯೆ ಲಾ 209 ಎಲ್‌ಸಿಎಲ್ 2005 ದಿನಾಂಕ 31.12.2005.
4. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ್ ಇವರ ಪತ್ರ ಸಂಖ್ಯೆ:349/2006 ದಿನಾಂಕ:8.2.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:24.12.05ರ ಸರ್ಕಾರಿ ಆದೇಶದಲ್ಲಿ ಗದಗ್ ಕಂದಾಯ ತಾಲ್ಲೂಕಿಗೆ ಎರಡು ನೋಟರಿ ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಲಾಗಿತ್ತು.ಸದರಿ ಹುದ್ದೆಗಳಿಗೆ ನೇಮಕಾತಿ ಮಾಡುವ ಸಲುವಾಗಿ ನಿಯಮಗಳನ್ವಯ ಕ್ರಮಕೈಗೊಂಡು ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ:31.12.05 ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ್ ಇವರನ್ನು ಕೋರಲಾಗಿತ್ತು.

ಆ ಮೇರೆಗೆ ಮೇಲೆ (3)ರಲ್ಲಿ ಓದಲಾದ ಓದಲಾದ ದಿನಾಂಕ:8.2.2006ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ್ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 46 ಎಲ್‌ಸಿಎಲ್ 2006, ಬೆಂಗಳೂರು, ದಿನಾಂಕ: 19ನೇ ಮೇ 2006**

ನೋಟರಿ ನಿಯಮಗಳ (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ(1952) ಹಾಗೂ ಅದರ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ. ಹರೀಂದ್ರ ವಾಸುದೇವ ಭಟ್, ವಕೀಲರು, ಪ್ಲಾಟ್ ನಂ. 13, ಎನ್.ಎಆರ್‌ಎಸ್

ನಂ. 242ಸಿ, ಪಿಪಿಜಿ ಕಾಲೇಜ್ ಹತ್ತಿರ, ಹಟಲಗೇರಿರಸ್ತೆ, ಗದಗ್ ಮತ್ತು ಶ್ರೀ ಹುಬ್ಲಿ ವೀರಬಸಪ್ಪ, ವಕೀಲರು, ಪ್ರಿಯದರ್ಶಿನಿ ಶಿಕ್ಷಣ ಸಂಸ್ಥೆ, ನಂದೀಶ್ವರ ನಗರ,ಕಳಸಾಪೂರ ರಸ್ತೆ, ಗದಗ್, ಗದಗ್, ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಗದಗ್ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗಧಿ ಪಡಿಸಲಾದ ರೂ. 1000(ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರು ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್.ಆರ್.**

ಪಿ.ಆರ್. 879

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ವಿಷಯ:** ಬಂಗಾರಪೇಟೆ ಕಂದಾಯ ತಾಲ್ಲೂಕಿಗೆ ನೋಟರಿ ನೇಮಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ.ಲಾ 209 ಎಲ್‌ಸಿಎಲ್ 05, ದಿನಾಂಕ:24.12.05.
2. ಸರ್ಕಾರಿ ಪತ್ರ ಸಂಖ್ಯೆ ಲಾ 209 ಎಲ್‌ಸಿಎಲ್ 05 ದಿನಾಂಕ:31.12.05.
3. ಪ್ರಧಾನ ಜಿಲ್ಲಾ ಸತ್ರ ನ್ಯಾಯಾಧೀಶರು, ಕೋಲಾರ ಇವರ ಪತ್ರ ಸಂಖ್ಯೆ:ಎಂ.ಟಿ.2536/2006, ದಿನಾಂಕ:25.02.06.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೋಲಾರ ಜಿಲ್ಲೆ ಬಂಗಾರಪೇಟೆ ಕಂದಾಯ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಸೃಜಿಸಲಾಗಿತ್ತು. ಸದರಿ ಹುದ್ದೆಗೆ ನೇಮಕಾತಿ ಮಾಡುವ ಸಲುವಾಗಿ ನೋಟರಿ ನಿಯಮಗಳನ್ವಯ ಪರಿಶೀಲಿಸಿ ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರನ್ನು ಕೋರಲಾಗಿತ್ತು.

ಆ ಮೇರೆಗೆ ಮೇಲೆ (3)ರಲ್ಲಿ ಓದಲಾದ ಪತ್ರದೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಲಾ 56 ಎಲ್‌ಸಿಎಲ್ 2006, ಬೆಂಗಳೂರು, ದಿನಾಂಕ: 30ನೇ ಮೇ 2006**

ನೋಟರಿ ನಿಯಮಗಳ (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ 1952 ಹಾಗೂ ಉಲ್ಲೇಖಿತ ನಿಯಮಗಳ ರೀತ್ಯ ಶ್ರೀ ವಿ.ಎಸ್. ವೇಣುಗೋಪಾಲ್, ವಕೀಲರು, ನಂ. 1068, ರಾಮಚಂದ್ರ ರಾವ್ ರೋಡ್, ಬಂಗಾರಪೇಟೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬಂಗಾರಪೇಟೆ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0- ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್.ಆರ್.**

ಪಿ.ಆರ್. 909

ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ-2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ (ಆಡಳಿತ-2)

**ವಿಷಯ:** ಹಾವೇರಿ ತಾಲ್ಲೂಕಿಗೆ ನೋಟರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಲಾ 209 ಎಲ್‌ಸಿಎಲ್ 2005 ದಿನಾಂಕ:24.12.05.
2. ಸರ್ಕಾರಿ ಪತ್ರ ಸಂಖ್ಯೆ ಲಾ 209 ಎಲ್‌ಸಿಎಲ್ 2005 ದಿನಾಂಕ:31.12.05.
3. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಇವರ ಪತ್ರ ಸಂಖ್ಯೆ:O.No.688/2006, ದಿನಾಂಕ:20.3.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಾವೇರಿ ಜಿಲ್ಲೆ ಹಾವೇರಿ ಕಂದಾಯ ತಾಲ್ಲೂಕಿಗೆ ಎರಡು ನೋಟರಿ ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಲಾಗಿತ್ತು. ನಂತರ ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಪತ್ರದಲ್ಲಿ ಸದರಿ ಹುದ್ದೆಗಳಿಗೆ ಅರ್ಹ ವಕೀಲರನ್ನು ನೇಮಕಾತಿ ಮಾಡುವ ಸಲುವಾಗಿ ನಿಯಮಗಳನ್ವಯ ಕ್ರಮಕೈಗೊಂಡು ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಇವರನ್ನು ಕೋರಲಾಗಿತ್ತು.

ಆ ಮೇರೆಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ 20.3.2006ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 77 ಎಲ್‌ಸಿಎಲ್ 2006, ಬೆಂಗಳೂರು, ದಿನಾಂಕ: 30ನೇ ಮೇ 2006**

ನೋಟರಿ ನಿಯಮಗಳ (1956) ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ ನೋಟರಿ ಅಧಿನಿಯಮ (1952) ಹಾಗೂ ಉಲ್ಲೇಖಿತ ನಿಯಮಗಳ ರೀತ್ಯ ಕೆಳಗಿನವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹಾವೇರಿ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಶ್ರೀ ಗಣಪ್ಪ ಕೃಷ್ಣಪ್ಪ ಕಮ್ಮೂರು, ವಕೀಲರು, ಆಗಡಿ ಅಂಚೆ, ಹಾವೇರಿ.

ಶ್ರೀ ಚಂದ್ರಶೇಖರಯ್ಯ ನಾಗಯ್ಯ ಒಡೆಯರ್, ವಕೀಲರು, ಮಂಜುನಾಥನಗರ, ಶ್ರೀ ರೇವಣಸಿದ್ದೇಶ್ವರ ನಿಲಯ, 1ನೇ ಮೈನ್, 3ನೇ ಕ್ರಾಸ್, ಹಾವೇರಿ.

ಸದರಿ ವಕೀಲರುಗಳು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0- ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್. ಶಕುಂತಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 910

**ವಿಷಯ:** ಚಿಂಚೋಳಿ ತಾಲ್ಲೂಕಿಗೆ ನೋಟರಿ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಲಾ 08 ಎಲ್‌ಸಿಎಲ್ 97 ದಿನಾಂಕ:31.01.98.
2. ಸರ್ಕಾರಿ ಪತ್ರ ಸಂಖ್ಯೆ: ಲಾ 86 ಎಲ್‌ಸಿಎಲ್ 03 ದಿನಾಂಕ:7.2.2004.
3. ಸರ್ಕಾರಿ ಪತ್ರ ಸಂಖ್ಯೆ: ಲಾ 156 ಎಲ್‌ಸಿಎಲ್ 05 ದಿನಾಂಕ:28.7.05.
4. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಜಿಲ್ಲೆ ಇವರ ಪತ್ರ ಸಂಖ್ಯೆ. DCG/ADMN/859/06 ದಿನಾಂಕ:15.4.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಸೃಜಿಸಲಾಗಿತ್ತು. ನಂತರ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಚಿಂಚೋಳಿ ತಾಲ್ಲೂಕಿನ ನೋಟರಿಯಾಗಿದ್ದ ಶ್ರೀ ಬಿ.ಎಸ್. ಪಾಟೀಲ ಇವರನ್ನು ನೋಟರಿ ವೃತ್ತಿಯಿಂದ ತೆಗೆಯಲಾಗಿತ್ತು. ಸದರಿ ಹುದ್ದೆಗಳಿಗೆ ಸೂಕ್ತ ವಕೀಲರನ್ನು ನೇಮಕಾತಿ ಮಾಡುವ ಸಲುವಾಗಿ ನಿಯಮಗಳನ್ವಯ ಕ್ರಮಕೈಗೊಂಡು ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಇವರನ್ನು ಕೋರಲಾಗಿತ್ತು.

ಆ ಮೇರೆಗೆ ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 156 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 30ನೇ ಮೇ 2006**

ನೋಟರಿ ನಿಯಮಗಳ (1956) ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಉಲ್ಲೇಖಿತ ನಿಯಮಗಳ ರೀತ್ಯ ಕೆಳಗಿನವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಚಿಂಚೋಳಿ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಶ್ರೀಮತಿ ಸುರೇಖ ವಕೀಲರು, ಪೋಲಕ ಪಳ್ಳಿ ಚಿಂಚೋಳಿ ತಾ, ಗುಲ್ಬರ್ಗಾ

ಶ್ರೀ ಭೀಮಶೆಟ್ಟಿ ವೀರಶೆಟ್ಟಿ ಪಾಟೀಲ್, ವಕೀಲರು ಚಿಂಚೋಳಿ ತಾಲ್ಲೂಕು, ಗುಲ್ಬರ್ಗಾ.

ಸದರಿ ವಕೀಲರುಗಳು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಆರ್. ಶಕುಂತಲ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 911

**ವಿಷಯ:** ಕೊಳ್ಳೇಗಾಲ ಕಂದಾಯ ತಾಲ್ಲೂಕಿನ ನೋಟರಿ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಲಾ 41 ಎಲ್‌ಸಿಎಲ್ 04 ದಿನಾಂಕ:31.01.2005.
2. ಸರ್ಕಾರದ ಪತ್ರ ಸಂಖ್ಯೆ: ಲಾ 212 ಎಲ್‌ಸಿಎಲ್ 05 ದಿನಾಂಕ:30.8.2005.
3. ಪತ್ರ ಸಂಖ್ಯೆ:575/2006 ದಿನಾಂಕ:27.3.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಆರ್. ನರೇಂದ್ರ ನೋಟರಿ, ಕೊಳ್ಳೇಗಾಲ ಇವರ ರಾಜೀನಾಮೆಯನ್ನು ಅಂಗೀಕರಿಸಲಾಗಿತ್ತು. ನಂತರ ಸದರಿ ಹುದ್ದೆಯನ್ನು ಬೇರೆಯವರಿಂದ ತುಂಬುವ ಕುರಿತಂತೆ ನಿಯಮಗಳನ್ವಯ ಕ್ರಮಕೈಗೊಂಡು ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ ಇವರನ್ನು ಕೋರಲಾಗಿತ್ತು. ಆ ಮೇರೆಗೆ ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಅದನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ. ಲಾ 212 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 7ನೇ ಜೂನ್ 2006**

ನೋಟರಿ ನಿಯಮಗಳ (1956) ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಉಲ್ಲೇಖಿತ ನಿಯಮಗಳ ರೀತ್ಯ ಶ್ರೀ ಮಾದಪ್ಪ ಬಿನ್ ವಿ. ಗುರುಮಲ್ಲಪ್ಪ, ವಕೀಲರು, ಬಸವೇಶ್ವರನಗರ, ಬಸ್ತಿಪುರ ರಸ್ತೆ ವೆಂಕಟೇಶ್ವರ ಸಾಮಿಲ್ ಎದುರು, ಕೊಳ್ಳೇಗಾಲ ಚಾಮರಾಜನಗರ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಕೊಳ್ಳೇಗಾಲ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

ಸದರಿ ವಕೀಲರುಗಳು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ 4ನೇ ಅಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲ**

ಪಿ.ಆರ್. 913

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ವಿಷಯ:** ಶ್ರೀ ವೈ.ಆರ್. ಚಂದ್ರಶೇಖರ್, ನೋಟರಿ, ಬೆಂಗಳೂರು (ನಗರ) ಇವರ ವೃತ್ತಿ, ಪ್ರಮಾಣ ಪತ್ರ ನವೀಕರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಪತ್ರ ಸಂಖ್ಯೆ: ಲಾ 255 ಎಲ್‌ಸಿಎಲ್ 2001 ದಿನಾಂಕ:16.7.2003.
2. ಪತ್ರ ಸಂಖ್ಯೆ: ಎಡಿಎಂ:I(ಬಿ)243/2005 ದಿನಾಂಕ:21.12.2005.

**ಪ್ರಸ್ತಾವನೆ:**

ಶ್ರೀ ವೈ.ಆರ್. ಚಂದ್ರಶೇಖರ್, ಇವರು ನೋಟರಿ ಪ್ರಮಾಣ ಪತ್ರವನ್ನು ದಿನಾಂಕ 10.12.2001 ರಿಂದ ನವೀಕರಿಸುವಂತೆ ದಿನಾಂಕ 10.10.2001 ರಂದು ಮನವಿ ಸಲ್ಲಿಸಿದ್ದರು. ಈ ಮಧ್ಯೆ ಶ್ರೀ ವೈ.ಆರ್. ಚಂದ್ರಶೇಖರ್, ಇವರು ಕೆಲವು ಸುಳ್ಳು ದಾಖಲಾತಿಗಳನ್ನು ಪ್ರಮಾಣೀಕರಿಸಿರುವುದಾಗಿ ದೂರನ್ನು ಸ್ವೀಕರಿಸಲಾಗಿತ್ತು. ಆ ಕುರಿತಂತೆ ವಿಚಾರಣೆ ನಡೆಸಿ ವರದಿ ಕಳುಹಿಸಿಕೊಡುವಂತೆ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ಕೋರಲಾಗಿತ್ತು. ಆ ಮೇರೆಗೆ ಮೇಲೆ (2)ರಲ್ಲಿ ಓದಲಾದ ಪತ್ರದೊಂದಿಗೆ ವರದಿ ಸಲ್ಲಿಸುತ್ತಾ, ಉಲ್ಲೇಖಿತ ದೂರಿನಲ್ಲಿ ಯಾವುದೇ ಸತ್ಯಾಂಶವಿರುವುದಿಲ್ಲ ಎಂಬುದಾಗಿ ತಿಳಿಸಿರುತ್ತಾರೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 255 ಎಲ್‌ಸಿಎಲ್ 2001, ಬೆಂಗಳೂರು, ದಿನಾಂಕ: 8ನೇ ಜೂನ್ 2006**

ಶ್ರೀ ವೈ.ಆರ್. ಚಂದ್ರಶೇಖರ್, ನೋಟರಿ, ಬೆಂಗಳೂರು (ನಗರ) ಇವರ ನೋಟರಿ ಪ್ರಮಾಣ ಪತ್ರವನ್ನು ನವೀಕರಿಸುವ ದಿನಾಂಕದಿಂದ ಐದು ವರ್ಷಗಳ ಅವಧಿಗೆ ನವೀಕರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್.ಆರ್.**

ಪಿ.ಆರ್. 955

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## LAW, JUSTICE AND HUMAN RIGHTS SECRETARIAT

**Sub:** Disciplinary action in respect of Smt Lingamma Patil Civil Judge (Junior Division) reg.

**Read:** Letter No.D.I.5/98(HVC91)/96 dated 14.3.2005.

**PREAMBLE:**

Smt Lingamma Patil Civil Judge (Junior Division) and J.M.F.C. joined he judicial service on 25.1.1985. There were certain complaints against the said Officer. In this connection, the following article of charges were communicated to her on 05.2.2001:-

**Charge I:** (a) That while working as Munsiff & JMFC, Afzalpur during March 1996, you had failed to peruse and consider the Registration Certificate pertaining to a KSRTC Bus, bearing No.KA-01 F-5935 which had met with an accident on 4.3.1996 and a case had been registered under Crime No.12/96 for offences under Section 279, 337 and 427 I.P.C. while considering the application filed for release of the vehicle.

(b) It is also alleged that even in respect of another accident case involving a KSRTC Bus, you had harassed KSRTC and had detained the vehicle for 13 days.

(c) You had misused your official powers while working as Munsiff JMFC, Afzalpur, by directing the KSRTC driver to stop the Bus near your quarters for the purpose of going to Gulbarga every day excepting Mondays and Tuesday and also had traveled without ticket.

Charge-II: (a) That while working as Munisiff & JMFC, Bidar you had raised loan from Karnataka Bank, without prior permission and the same had resulted in filing of a Suit against you for the recovery of the amount in O.S.355/93 on the file of Additional Munsiff, Bidar.

(b) That while working in so, you had also raised loan from the Syndicate Bank, Bdar, without permission and the same resulted in filing of Suit against you in O.S.374/92 on the file of Munsiff, Bidar.

(c) While working at Bidar as Munsiff and JMFC, you had raised loan from Vysya Bank, Bidar Branch without permission of the High Court and the same resulted in filing of Small Cause Suit against you in S.C.105/95 on the file of Civil Judge, Bidar.

(d) While working at Bidar as Munsiff & JMFC, you had also obtained loan from Karnataka Industrial Co-operative Ban, Bidar, without permission of the High Court and the same has resulted in passing of award aganst you and issue of Salary attachment Warrant against you.

**CHARGE-III:** That while workng as Munsiff & JMFC, Bidar you had raised loans from Karnataka Bank, Syndicate Bank, Karnataka Industrial Co-operative Bank, as detailed at charge No.2 from 'A' to 'D' and from this it is clear that you had habitually indebted yourself, within the meaning of Rule 2 of KCS (Conduct) Rules, 1966 and the same amount to misconduct within the meaning of Rule 3(1)(iii) of KCS (Conduct) Rules, 1966.

2. The officer submitted her explanation on 23.3.2001. After Examining the said explanation the Hon'ble Administrative Committee-III of the High Court decided to drop the charges no. 1 (a), (b) and (c) and enquiry was directed to be held only in respect of Charge No. II (a), (b), (c), (d) and III.

3. Accordingly a departmental inquiry was held in D.I. N.5/1998. Sri P. Krishna Bhat, Ist Additional District & Sessions Judge, (Bangalore Rural District) was appointed as Inquiring Authority, vide order dated 22.3.2002, who held the officer is guilty of charges at II(a), (b), (c), (d) and III.

4. A copy of inquiry report was furnished to the delinquent judicial officer on 16/17.1.2003. She submitted her explanation in this behalf on 4/11.02.2003. After examining the explanation HJon'ble High Court of Karnataka resolved to impose a penalty of dismissal from service on the delinquent officer.

5. In this connection, His Excellency, the Governor has made certain observations and the same were communicated to High Court vide Government letter dated 16.11.2004. In pursuance of that, vide letter dated 14.3.2005, High Court of Karnataka has agrre to impose a penalty of compulsory retirement on delinquent officer, subject to certain conditions.

**Government Order No. LAW 145 LC 2003, Bangalore, Dated: 9th June 2006**

After examining the proposal, Government are pleased:-

i) to impose the penalty of compulsory retirement on Smt Lingamma Patil, Civil Judge (Junior Division) (under suspension), as provided in rule 8, sub-rule (vi) of Karnataka Civil Services (Classification, Control and Appeal) Rules, 1957, with effect from 28.2.2005 and

ii) to treat the period of her suspension from 20.4.2001 to 28.2.2005 as on duty, only for the purpose of computing the qualifying service, for pensionary benefits and to restrict the emoluments during the period of suspension to the subsistence allowance and other monetary benefits already paid to the Officer.

By Order and in the name of the Governor of Karnataka,
**SHAKUNTHALA H.R.**
Under Secretary to Government (Admin-I)
Law, Justice and Human Rights Department.

P.R. 956

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಹುಬ್ಬಳ್ಳಿ ಈದ್ಗಾ ಮೈದಾನದ ವಿಷಯಗಳನ್ನು ಸಂಬಂಧ ಪಟ್ಟವರೊಂದಿಗೆ ಮಾತುಕತೆಗಳನ್ನು ನಡೆಸಲು ಹಾಗೂ ಪರಸ್ಪರ ಸಮ್ಮತಿಯ ಪರಿಹಾರಗಳನ್ನು ರೂಪಿಸುವ ಬಗ್ಗೆ - ಆದೇಶ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ:ನಅಇ 148 ಎಹೆಚ್‌ಡಿ 2004 ದಿನಾಂಕ:7.9.2004

**ಪ್ರಸ್ತಾವನೆ:**

ಹುಬ್ಬಳ್ಳಿಯ ಟ್ರಾಫಿಕ್ ಐಲ್ಯಾಂಡ್‌ನ ವಾರ್ಡ್ ನಂ.3, ಸಿಟಿಎಸ್ ಸಂಖ್ಯೆ:174ರಲ್ಲಿರುವ 4991 ಚದರ ಗಜಗಳ ಜಮೀನಿನ ವಿಷಯದಲ್ಲಿನ ವಿವಾದವು ಸರ್ವೋಚ್ಛ ನ್ಯಾಯಾಲಯದಲ್ಲಿ ಸಿವಿಲ್ ಅಪೀಲು ಸಂಖ್ಯೆ:1019/-1021:95ರಲ್ಲಿ ಬಾಕಿ ಇರುತ್ತದೆ. ಈ ವಿವಾದವನ್ನು ಪರಸ್ಪರ ಮಾತುಕತೆಯ ಮೂಲಕ ಸೌಹಾರ್ದಯುತವಾಗಿ ಬಗೆಹರಿಸಲು ಸಂಬಂಧಪಟ್ಟ ಪ್ರತಿನಿಧಿಗಳೊಂದಿಗೆ ಮಾತುಕತೆಗಳನ್ನು ನಡೆಸಲು ಹಾಗೂ ಈ ಸೂಕ್ಷ್ಮ ಮತ್ತು ಬಹುಕಾಲದಿಂದ ಇತ್ಯರ್ಥವಾಗದೇ ಉಳಿದಿರುವ ವಿವಾದಕ್ಕೆ ಪರಸ್ಪರ ಸಮ್ಮತಿಯ ಪರಿಹಾರಗಳನ್ನು ರೂಪಿಸಲು ಮೇಲೆ ಓದಲಾದ ಆದೇಶದಲ್ಲಿ ಅಂದಿನ ಮಾನ್ಯ ಪೌರಾಡಳಿತ ಸಚಿವರಾದ ಶ್ರೀ ಎಸ್.ಆರ್. ಮೋರೆ ಇವರನ್ನು ನಾಮನಿರ್ದೇಶನ ಮಾಡಲಾಗಿತ್ತು. ಈ ವಿಷಯದಲ್ಲಿ ಸಚಿವ ಸಂಪುಟದ ದಿನಾಂಕ:25.4.2005 ರಂದು ನಡೆದ ಸಭೆಯಲ್ಲಿ ಚರ್ಚಿಸಿ ಈ ಬಗ್ಗೆ ಒಂದು ಸಮಿತಿಯನ್ನು ರಚಿಸಲು ಹಾಗೂ ಈ ಸಮಿತಿಗೆ ಅವಶ್ಯವಾದ ನಾಮನಿರ್ದೇಶನಗಳನ್ನು ಮಾಡಲು ಸಚಿವ ಸಂಪುಟವು ಮಾನ್ಯ ಮುಖ್ಯಮಂತ್ರಿಗಳಿಗೆ ಅಧಿಕಾರವನ್ನು ನೀಡಿರುವುದರಿಂದ, ಈ ವಿಷಯಲ್ಲಿ ಸಮಿತಿಯನ್ನು ರಚಿಸಲು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 148 ಎಹೆಚ್‌ಡಿ 2004, ಬೆಂಗಳೂರು, ದಿನಾಂಕ: 9ನೇ ಜೂನ್ 2006**

ದಿನಾಂಕ:7.9.2004ರ ಆದೇಶ ಸಂಖ್ಯೆ:ನಅಇ 148 ಎಹೆಚ್‌ಡಿ 2004ನ್ನು ಮಾರ್ಪಡಿಸುತ್ತಾ, ಹುಬ್ಬಳ್ಳಿ ಈದ್ಗಾ ಮೈದಾನದ ವಿಷಯಕ್ಕೆ ಸಂಬಂಧಪಟ್ಟಂತೆ, ಪ್ರತಿನಿಧಿಗಳೊಂದಿಗೆ ಮಾತುಕತೆಗಳನ್ನು ನಡೆಸಲು ಹಾಗೂ ಈ ಸೂಕ್ಷ್ಮ ಮತ್ತು ಬಹುಕಾಲದಿಂದ ಇತ್ಯರ್ಥವಾಗದೇ ಉಳಿದಿರುವ ವಿವಾದಕ್ಕೆ ಪರಸ್ಪರ ಸಮ್ಮತಿಯ ಪರಿಹಾರಗಳನ್ನು ರೂಪಿಸಲು ಈ ಕೆಳಕಂಡವರುಗಳನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

1. ಶ್ರೀ ಬಸವರಾಜ ಹೊರಟ್ಟಿ, ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು - ಅಧ್ಯಕ್ಷರು
2. ಶ್ರೀ ಜಬ್ಬಾರ್ ಖಾನ್ ಹೆಚ್. ಹೊನ್ನಳ್ಳಿ, ಮಾನ್ಯ ಶಾಸಕರು, ಹಾಗೂ ಗೌರವ ಕಾರ್ಯದರ್ಶಿಗಳು, ಅಂಜುಮನ್-ಎ-ಇಸ್ಲಾಂ ಸಂಸ್ಥೆ, ಹುಬ್ಬಳ್ಳಿ - ಸದಸ್ಯರು
3. ಶ್ರೀ ಎಂ.ಆರ್. ಮುಲ್ಲಾ ನ್ಯಾಯವಾದಿಗಳು ಹಾಗೂ ಉಪಾಧ್ಯಕ್ಷರು, ಅಂಜುಮನ್-ಎ-ಇಸ್ಲಾಂ ಸಂಸ್ಥೆ, ಹುಬ್ಬಳ್ಳಿ - ಸದಸ್ಯರು
4. ಡಾ:ಐ.ಎಂ. ಸವದತ್ತಿ, ಮಾನ್ಯ ನಿವೃತ್ತ ಕುಲಪತಿಗಳು - ಸದಸ್ಯರು
5. ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಧಾರವಾಡ - ಸದಸ್ಯ ಕಾರ್ಯದರ್ಶಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 934

**ಎಸ್.ಜಿ. ಸಂಪತ್‌ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಆಡಳಿತ ತರಬೇತಿ ಸಂಸ್ಥೆಯಲ್ಲಿ ಡಿಸಾಸ್ಟರ್ ಮ್ಯಾನೇಜ್‌ಮೆಂಟ್ ಅನ್ನು ರಚಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: 35-21/2003-NDA(II), ದಿನಾಂಕ: 6ನೇ ಅಕ್ಟೋಬರ್ 2003.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳಿಗೆ ಕಳುಹಿಸಿರುವ ಆಡಳಿತ ತರಬೇತಿ ಸಂಸ್ಥೆಯ ಪತ್ರ ಸಂಖ್ಯೆ:ಇಎಸ್‌ಟಿ (1)/ಸಿಆರ್/143/2005-06, ದಿನಾಂಕ: 17ನೇ ಡಿಸೆಂಬರ್ 2005.

**ಪ್ರಸ್ತಾವನೆ:**

ರಾಜ್ಯಗಳಲ್ಲಿನ ಆಡಳಿತ ತರಬೇತಿ ಸಂಸ್ಥೆಗಳಲ್ಲಿ ರಚಿಸುವ ರಿಸಾಸ್ಟರ್ ಮ್ಯಾನೇಜ್‌ಮೆಂಟ್ ಫ್ಯಾಕಲ್ಟಿಗೆ ವಾರ್ಷಿಕ ರೂ.10.00 ಲಕ್ಷಗಳಿಗೆ ಮೀರದಂತೆ ಭಾರತ ಸರ್ಕಾರವು ನೆರವನ್ನು ನೀಡುತ್ತಿದ್ದು, ಕೆಲವು ಸಂಘಗಳು/ಫ್ಯಾಕಲ್ಟಿಸ್‌ಗಳನ್ನು ಸೆಂಟರ್ ಆಫ್ ಎಕ್ಸೆಲೆನ್ಸ್ ಫಾರ್ ಸೈಕ್ಲೋನ್ ಮಿಟಿಗೇಷನ್ ಅಂಡ್ ಮ್ಯಾನೇಜ್‌ಮೆಂಟ್ ಅಂಡ್ ಸೆಂಟರ್ ಆಫ್ ಎಕ್ಸೆಲೆನ್ಸ್ ಫಾರ್ ಅರ್ತ್‌ಕ್ವೇಕ್ ಮಿಟಿಗೇಷನ್ ಮ್ಯಾನೇಜ್‌ಮೆಂಟ್ ಅಂಡ್ ಸೆಂಟರ್ ಫಾರ್ ಎಕ್ಸೆಲೆನ್ಸ್ ಇನ್ ಫ್ಲಡ್ ಮಿಟಿಗೇಷನ್ ಅಂಡ್ ಮ್ಯಾನೇಜ್‌ಮೆಂಟ್ ಎಂದು ಪದನಾಮೀಕರಿಸಬೇಕೆಂದು ಉದ್ದೇಶಿಸಿದೆ ಎಂದು ತಿಳಿಸುತ್ತಾ, ಅಗತ್ಯವಾದ ಫ್ಯಾಕಲ್ಟಿಯನ್ನು ನೇಮಕ ಮಾಡಿಕೊಳ್ಳಲು ಸಾಧ್ಯವಾಗದ ಕಾರಣ, ಕೆಲವು ರಾಜ್ಯಗಳಲ್ಲಿ ಡಿಸಾಸ್ಟರ್ ಮ್ಯಾನೇಜ್‌ಮೆಂಟ್ ಸೆಂಟರ್ ಅನ್ನು ಇನ್ನೂ ರಚಿಸಲಾಗಿಲ್ಲದಿರುವುದರಿಂದ, ಈ ವಿಷಯದಲ್ಲಿ ಸೂಕ್ತ ಕ್ರಮವನ್ನು ತೆಗೆದುಕೊಳ್ಳಬೇಕೆಂದು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೇಂದ್ರ ಸರ್ಕಾರದ ಸಹ ಕಾರ್ಯದರ್ಶಿಯವರು ಕೋರಿರುತ್ತಾರೆ.

ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಡಿಸಾಸ್ಟರ್ ಮ್ಯಾನೇಜ್‌ಮೆಂಟ್/ಮಿನಿಸ್ಟ್ರಿ ಆಫ್ ಹೋಮ್ ಅಫೇರ್ಸ್ ನಿಗದಿಪಡಿಸಿರುವಂತೆ ಆಡಳಿತ ತರಬೇತಿ ಸಂಸ್ಥೆಯಲ್ಲಿ ಡಿಸಾಸ್ಟರ್ ಮ್ಯಾನೇಜ್‌ಮೆಂಟ್ ಸೆಂಟರ್ ಇಲ್ಲವೆಂದೂ, ಈ ಸೆಂಟರ್ ಅನ್ನು ರಚಿಸುವ ಅವಶ್ಯಕತೆ ಇದೆಯೆಂದೂ ತಿಳಿಸುತ್ತಾ, ಈ ಸೆಂಟರ್‌ಗೆ ಕೆಳಕಂಡಂತೆ ಸಿಬ್ಬಂದಿಯನ್ನು ನೇಮಿಸಬೇಕೆಂದು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಆಡಳಿತ ತರಬೇತಿ ಸಂಸ್ಥೆಯು ಸರ್ಕಾರವನ್ನು ಕೋರಿರುತ್ತಾರೆ.

| Designation and Scale of Pay | No. of Posts | Qualification |
|---|---|---|
| Head of Faculty (12800-16720) | One | Masters Degree OR a Technical Degree of a Recognised University |
| Faculty (10620-14960) | Three | Masters Degree OR a Technical Degree of a Recognised University |
| Personal Assistant (3850-7050) | Two | Degree of a Recognised University with the knowledge of Computer applications and Shorthand |
| Documentation Officer (6000-12000) | One | B.Sc. (I.T.) or B.Sc., (Computer Science) with Degree or Diploma in Library<br>OR<br>B.Sc. (Mathematics / Statistics / Physics) with Diploma in Library Science and P.G. Diploma in Computer Applications<br>B.Library and Information, Science with P.G. Diploma in Computer applications |
| Data Entry Operator (3000-5450) | Two | P.U.C. or 10+2 with Certificate Course in Computer Operations and M.S. Office |
| Messenger (2500-3850) | Two | S.S.L.C. |

ಆಡಳಿತ ತರಬೇತಿ ಸಂಸ್ಥೆಯ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ.

**ಆದೇಶ ಸಂಖ್ಯೆ: ಸಿಆಸುಇ 14 ಇಆತ 2006, ಬೆಂಗಳೂರು, ದಿನಾಂಕ: 13ನೇ ಜೂನ್ 2006**

ಮೈಸೂರಿನ ಆಡಳಿತ ತರಬೇತಿ ಸಂಸ್ಥೆಯಲ್ಲಿ ಡಿಸಾಸ್ಟರ್ ಮ್ಯಾನೇಜ್‌ಮೆಂಟ್ ಸೆಂಟರ್ ಅನ್ನು ರಚಿಸಲು ಮತ್ತು ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು ಕೇಂದ್ರ ಸರ್ಕಾರವು ಒದಗಿಸುವ ರೂ.15.00 ಲಕ್ಷಗಳೊಂದಿಗೆ ಉಳಿದ ವೆಚ್ಚವನ್ನು ಸಿಆರ್‌ಎಫ್ ಫಂಡ್‌ನಿಂದ ಭರಿಸಲು ಹಾಗೂ ಕೆಳಕಂಡ ಸಿಬ್ಬಂದಿಯ ಸೃಜನೆಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | Head of Faculty | One |
| 2. | Faculty | Three |
| 3. | Personal Assistant | Two |
| 4. | Documentation Officer | One |
| 5. | Data Entry Operator | Two |
| 6. | Messenger | Two |

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಂಖ್ಯೆ: ಎಫ್‌ಡಿ 406 ವೆಚ್ಚ-5/2006, ದಿನಾಂಕ 22ನೇ ಮೇ 2006ರ ಟಿಪ್ಪಣಿಯಲ್ಲಿ ನೀಡಿರುವ ಸಹಮತಿಯ ಮೇರೆಗೆ, ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಅನಸೂಯ**

ಪಿ.ಆರ್. 937

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ತರಬೇತಿ)

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಡಿ.ಸಿ. ಮರಿಯಪ್ಪಗೌಡ, ಹಿಂದಿನ ತಹಶೀಲ್ದಾರ್ (ಈಗ ನಿವೃತ್ತರು) ದೇವನಹಳ್ಳಿ, ಇವರ ವಿರುದ್ಧ ಹೂಡಲು ಉದ್ದೇಶಿಸಿದ್ದ ಇಲಾಖಾ ವಿಚಾರಣೆಯನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ.47.ಎಡಿಇ:99 ದಿ:31.3.2006.
2. ಸ.ಆ.ಸಂ.ಸಿಆಸುಇ:39:ಎಸ್‌ಇಎನ್ 99 ದಿ:9.2.2000.
3. ಶ್ರೀ ಮರಿಯಪ್ಪಗೌಡ, ನಿವೃತ್ತ ತಹಶೀಲ್ದಾರ್ ಇವರ ಮನವಿ ದಿ:5.4.2006.

ಶ್ರೀ ಡಿ.ಸಿ. ಮರಿಯಪ್ಪಗೌಡ, ಹಿಂದಿನ ತಹಶೀಲ್ದಾರ್, (ಈಗ ನಿವೃತ್ತರು) ದೇವನಹಳ್ಳಿ, ಇವರು ಈ ಹಿಂದೆ ಹಾಸನ ಜಿಲ್ಲೆ, ಆಲೂರು ತಾ.ಶಿರಸ್ತೇದಾರ್ ಆಗಿದ್ದು, ಆಲೂರು ತಹಶೀಲ್ದಾರ ಹುದ್ದೆಯಲ್ಲಿ ಪ್ರಭಾರದ ಮೇಲೆ ಕಾರ್ಯ ನಿರ್ವಹಿಸುತ್ತಿದ್ದಾಗ ಆಲೂರು ತಾಲ್ಲೂಕು ಕೆ. ಹೊಸಕೋಟೆ ಹೋಬಳಿ, ಹೈದೂರು ಗ್ರಾಮದ ಸ.ನಂ.136,137,138,139 ಮತ್ತು 43,44,ರಲ್ಲಿನ ಜಮೀನುಗಳು ಮಾಲೀಕರ ಅನುಭವದಲ್ಲಿದ್ದು ಕಂದಾಯ ದಾಖಲೆಗಳು ಅವರ ಹೆಸರಿನಲ್ಲಿದ್ದಾಗ್ಯೂ ಕಾನೂನು ಬಾಹಿರವಾಗಿ ಅನಧಿಕೃತದಾರರ ಹೆಸರನ್ನು ಪಹಣಿ ಕಾಲಂ 12(2)ರಲ್ಲಿ ನಮೂದಿಸಲು ಆದೇಶಿಸಿರುತ್ತಾರೆ. ಇದು ಸರ್ಕಾರದ ಸುತ್ತೋಲೆ ಸಂ.ಆರ್.ಡಿ.50.ಎಡಬ್ಲ್ಯೂರ್ 93, ದಿ:9.11.94ರಲ್ಲಿನ ಮಾರ್ಗಸೂಚಿಗೆ ವಿರುದ್ಧವಾಗಿರುತ್ತದೆ. ಶ್ರೀ ಡಿ.ಸಿ. ಮರಿಪ್ಪಗೌಡ, ರವರು ಕಾನೂನನ್ನು ಉಲ್ಲಂಘಿಸಿದ್ದು ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, I,II,III ನ್ನು ಉಲ್ಲಂಘಿಸಿದಂತಾಗುತ್ತದೆ. ಕಾನೂನು ಬಾಹಿರವಾಗಿ ಹಾಗೂ ಸರ್ಕಾರದ ಸುತ್ತೋಲೆ ವಿರುದ್ಧವಾಗಿ ಆದೇಶ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾದ ಕಾರಣ ಇವರ ವಿರುದ್ಧ ವಿಚಾರಣೆಯನ್ನು ನಡೆಸಲು ಉದ್ದೇಶಿಸಿ ವಿಚಾರಣೆಯನ್ನು ಬಾಕಿಯಿಟ್ಟು ಸದರಿಯವರನ್ನು ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಅಮಾನತ್ತುಗೊಳಿಸಲಾಗಿತ್ತು. ಮೇಲೆ ಓಲಾದ (3)ರ ಮನವಿಯಲ್ಲಿ ಇದೇ ಪ್ರಕರಣಕ್ಕೆ ಸಂಬಂಧಿಸಿದಂತೆ ಶ್ರೀ ಬೈಲಾಂಜನಪ್ಪ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರ ವಿರುದ್ಧ ಸಹ ಇಲಾಖಾ ವಿಚಾರಣೆ ನಡೆಸಲು ಉದ್ದೇಶಿಸಿ ನಂತರ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ ಎಂದು ತಿಳಿಸುತ್ತಾ ತಮ್ಮ ವಿರುದ್ಧದ ಇಲಾಖಾ ವಿಚಾರಣೆಯನ್ನು ಸಹ ಕೈಬಿಡಲು ಶ್ರೀ ಮರಿಯಪ್ಪಗೌಡ, ನಿವೃತ್ತ ತಹಶೀಲ್ದಾರ್ ಇವರು ಕೋರಿರುತ್ತಾರೆ.

ಇದೇ ಪ್ರಕರಣಕ್ಕೆ ಸಂಬಂಧಿಸಿದಂತೆ ಶ್ರೀ ಬೈಲಾಂಜನಪ್ಪ ಹಿಂದಿನ ಸಕಲೇಪುರ ಉಪ ವಿಭಾಗಾಧಿಕಾರಿಯವರು ಇವರ ವಿರುದ್ಧ ಸಿಆಸು ಇಲಾಖೆಯಲ್ಲಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಗಿತ್ತು. ಸದರಿ ವಿಚಾರಣೆಯಲ್ಲಿ ಅವರು ಹಕ್ಕು ಬದಲಾಣೆಯ ಆದೇಶ ಮಾಡಿದ್ದು ತಪ್ಪು ಎಂದು ವರು ತಪ್ಪಾಗಿ ಹೊರಡಿಸಿದ ಆದೇಶವನ್ನು ಉಚ್ಚ ನ್ಯಾಯಾಲಯವು ರದ್ದುಗೊಳಿಸಿದ್ದರಿಂದ ಸಿದ್ಧವಾಗಿರುತ್ತದೆ. ಆದಾಗ್ಯೂ ಸರ್ಕಾರಕ್ಕೆ ಆರ್ಥಿಕ ಹಾನಿಯಾಗಿಲ್ಲ ಎಂಬ ಕಾರಣಕ್ಕಾಗಿ ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಸಿಆಸು ಇಲಾಖೆಯು ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೈಬಿಟ್ಟಿದೆ.

ಇದೇ ಕಾರಣಳಿಂದಾಗಿ ಶ್ರೀ ಡಿ.ಸಿ. ಮರಿಯಪ್ಪಗೌಡ, ಹಿಂದಿನ ತಹಶೀಲ್ದಾರ್, ದೇವನಹಳ್ಳಿ (ಈಗ ನಿವೃತ್ತರು) ಇವರ ವಿರುದ್ಧ ಹೂಡಲು ಉದ್ದೇಶಿಸಲಾದ ಇಲಾಖಾ ವಿಚಾರಣೆಯನ್ನು ಕೈಬಿಡಲು ಸರ್ಕಾರ ನಿರ್ಧರಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ:47:ಎಡಿಇ:99, ಬೆಂಗಳೂರು, ದಿನಾಂಕ: 12ನೇ ಜೂನ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಡಿ.ಸಿ. ಮರಿಯಪ್ಪಗೌಡ, ಹಿಂದಿನ ತಹಶೀಲ್ದಾರ್ (ಈಗ ನಿವೃತ್ತರು) ದೇವನಹಳ್ಳಿ ಇವರ ವಿರುದ್ಧ ಹೂಡಲು ಉದ್ದೇಶಿಸಲಾದ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 953

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3).